# ತಿರುಮಲೆ-ತಿರುಪತಿ ದೇವಸ್ಥಾನದ ಮುಖ್ಯ ವಿಷಯಗಳು

---



# ಯಾತ್ರಿಕರ ವಿವರಣೆ:

---

| | | ಮೇ 1975 |
|---|---|---|
| ಘಾಟ್‌ರೋಡ್ಡಿನ ಮೇಲೆ ಪ್ರಯಾಣಿಸಿದ ಭಕ್ತರ ಸಂಖ್ಯೆ | ದೊಡ್ಡವರು : | 5,87,000 |
| | ಮಕ್ಕಳು : | 1,01,194 |
| ದೇವಸ್ಥಾನದ ಸತ್ರಗಳಲ್ಲಿ ವಸತಿ ಕೊಡಲ್ಪಟ್ಟ ಯಾತ್ರಿಕರು | ತಿರುಪತಿಯಲ್ಲಿ : | 1,08,836 |
| | ತಿರುಮಲೆಯಲ್ಲಿ: | 2,26,644 |
| ಘಾಟ್‌ರೋಡ್ಡಿನ ಮೇಲೆ ಪ್ರಯಾಣಿಸಿದ ವಾಹನಗಳು | ಕಾರುಗಳು : | 10,073 |
| | ಮೋಟಾರ್ ಸೈಕಿಲ್‌ಗಳು : | 263 |

# ಶ್ರೀ ವೇಂಕಟೇಶ್ವರಸ್ವಾಮಿಯವರ ಪವಿತ್ರೋತ್ಸವವು



ತಿರುಮಲೆಯಲ್ಲಿ **17—8—75** ನಿಂದ **19—8—75** ವರುವಿಗೆ ಜರುಗುವುದು.




# ಸಪ್ತಗಿರಿ

ಸಂಪುಟ ೬ ]  ಜುಲೈ 1975  [ ಸಂಚಿಕೆ ೨

ಗೌರವ ಸಂಪಾದಕರು :
ಶ್ರೀ ಪಿ. ಯಸ್. ರಾಜಗೋಪಾಲರಾಜು, B.A.B.L.,
ಟೆಲಿಫೋನ್ ನಂಬರು : 2322

*

ಸಂಪಾದಕರು:
ಕೆ. ಸುಬ್ಬಾರಾವು, ಯಂ.ಏ.,
ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.
ಟೆಲೀಫೋನ್ ನಂಬರು: 2254

*

ಮುದ್ರಣೆ :
ಯಂ. ವಿಜಯಕುಮಾರ್‌ರೆಡ್ಡಿ,
ಮೇನೇಜರು, ಟಿ. ಟಿ. ಡಿ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು : 2340

ವಾರ್ಷಿಕ ಚಂದಾ 6/- ರೂ.
ಬಿಡಿಪತ್ರಿಕೆ - 50 ಪೈ.

*

ಇತರ ವಿವರಗಳಿಗೆ:
ಸಂಪಾದಕರು
ತಿರುಮಲ-ತಿರುಪತಿ ದೇವಸ್ಥಾನಗಳು, ತಿರುಪತಿ.

## ವಿಷಯ ಸೂಚಿಕೆ:

ಪುಟ. ಸಂ.



ಮುಖಚಿತ್ರ : ತಿರುಮಲೆ ಬೆಟ್ಟದ ದೃಶ್ಯ.

ಅನಿವಾರ್ಯವಾದ ಕಾರಣಗಳಿಂದ ಪತ್ರಿಕೆಯನ್ನು ಸಕಾಲದಲ್ಲಿ ಬಿಡಿಸಲಾಗಲಿಲ್ಲವೆಂದು ತಿಳಿಸಲು ಚಿಂತಿಸುತ್ತೇವೆ.
–(ಸಂಪಾದಕರು):

# ಸಂಪಾದಕೀಯ

ಜೀವನ ವಿಧಾನವೇ ಜಾತಿಯ ಸೌಷ್ಠವದ ಪ್ರತಿಬಿಂಬ. ನಾವು ಹೇಗೆ ತಿನ್ನುತ್ತೇವೋ, ಹೇಗೆ ವಸ್ತ್ರಾದಿಕವನ್ನು ಧರಿಸುತ್ತೇವೋ, ಹೇಗೆ ಜೀವನ ನಡೆಸುತ್ತೇವೊ, ಅದೇ ನಮ್ಮನ್ನು ಕುರಿತು ಹೇಳುತ್ತದೆ. ಹಾಗೆಯೇ ನಮ್ಮ ಮನೆ, ಮಾಳಿಗೆಗಳನ್ನು ನಿರ್ಮಿಸುವವಿಧಾನ ನಮ್ಮ ಗತಚರಿತ್ರೆಯನ್ನು ಹೇಳುತ್ತದೆ. ಇದುವೇ ನಾಗರಿಕತೆಯೆಂಬುವುದೋ! ನಾವು ಈಗಲೂ ಬಡವದೇಶವೆಂದು ಹೇಳಲ್ಪಟ್ಟಿದ್ದರೂ, ಮುಹಂಜದಾರೋ, ಹರಪ್ಪಾ, ಮತ್ತು ನಾಗಾರ್ಜುನ ಮಲೆ ಮುಂತಾದವುಗಳಲ್ಲಿ ಬೆಳಿಗ್ಗೆ ಬಂದ, ನಗರಾವಶೇಷಗಳು ನಮ್ಮ ಜಾತಿಯನ್ನು ಅತ್ಯುತ್ತಮ ನಾಗರಿಕತೆಯುಳ್ಳ ಜಾತಿಗಳಲ್ಲಿ ಪ್ರತಿಷ್ಠಿಸಿದ್ದುವಕ್ಕಿದೇ ಕಾರಣವಾಗಿರಬಹುದು. ಆದರೆ, ಕಾಲಕ್ರಮದಲ್ಲಿ ಸಂಪ್ರದಾಯಗಳು ಪದ್ಧತಿಗಳು ತತ್ಕಾಲೀನವಾದ ಸಮಸ್ಯೆಗಳ ಪ್ರಭಾವದಲ್ಲಿ ಮಾರುತ್ತಾ ಹೋಗುತ್ತವೆ.

ತಿರುಮಲೆ ತಿರುಪತಿ ದೇವಸ್ಥಾನ ಮತ್ತು ಅದರ ಅಭಿವೃದ್ಧಿಗಳನ್ನು ಈ ದೃಷ್ಟಿಯಲ್ಲಿ ನೋಡಿದರೆ, ಈ ಪಟ್ಟಣವನ್ನು, ಭವಿಷ್ಯತ್ತಿನ ಜನರು ಗರ್ವಿಸುವಂತ ಆದರ್ಶವಂತವಾಗಿ ನಿರ್ಮಿಸುವುದಕ್ಕೆ ದೇವಸ್ಥಾನತೆ ಬಹಳ ಯತ್ನಿಸಿತ್ತೆಂದೇ ಹೇಳಬಹುದು. ಆದರೆ, ಈ ವಿಶ್ವದ ಮೂಲೆ ಮೂಲೆಗಳಿಂದ ಬರುತ್ತಿರುವ ಯಾತ್ರಿಕರ ಸಂದೋಹಃ ದೇವಸ್ಥಾನದ ಏರ್ಪಾಟುಗಳನ್ನು ತಗ್ಗಿಸಿ, ಈ ದೃಕ್ಕೋಣದಲ್ಲಿ ಆದರ್ಶಪ್ರಾಯವಾದ ನಗರವನ್ನು ರೂಪಿಸಲಾಗು ಬೃಹತ್ಪಥಕವೊಂದೇರ್ಪಡಿಸುವ ಆವಶ್ಯಕತೆಯನ್ನು ನಿರೂಪಿಸಿತು.

ಈ ಗಮ್ಯವನ್ನು ಸೇರಲು, ಒಂದು ಸಲ ಅಸಾಧ್ಯವಾದರೆ, ಸಾಮೀಪ್ಯವನ್ನಾದರೂ ಸೇರಲು, ದೇವಸ್ಥಾನವು ಸಹೃದಯತೆಯಿಂದ, ನಗರ ನಿರ್ಮಾಣದಕ್ಷರನ್ನು, ಒಂದೇ ವೇದಿಕಮೇಲೆ ಸೇರಿ, ಚರ್ಚಿಸಿ, ತಿರುಮಲೆಯನ್ನು ಆಕರ್ಷಣೀಯವಾಗಿಯು, ಆದರ್ಶವಂತವಾಗಿಯೂ ಮಾಡಲಾಗುವ ಪಥಕವನ್ನು ನಿರ್ಣಯಿಸಲು ಆಹ್ವಾನಿಸಿ, ಸಮಾರೋಹವನ್ನೇರ್ಪಾಟು ಮಾಡುತ್ತಿದೆ.

ಯಾತ್ರಿಕರ ‘ಕ್ಯೂ’ ವಿಧಾನವನ್ನು ಮಾರ್ಪಡಿಸುವುದು, ಸುಸಂಘಟಿತವಾದ ವಸ್ತು ವಿಕ್ರಯಕೇಂದ್ರವೇರ್ಪಾಟು ಮಾಡುವುದು, ಬಸ್ಸು ನಿಲ್ದಾಣಗಳ ಅಭಿವೃದ್ಧಿ, ಮುಂತಾಗುವುವು ಈ ಸಮಾರೋಹದಲ್ಲಿ ಚರ್ಚಿಸಲಾಗಿರುವ ವಿಶೇಷಗಳು.

ನಾವು ಕೇವಲ ನಡೆಯುವವರು ಮಾತ್ರವೇ! ನಡೆಸುವವನುಮಾತ್ರ ವೇರೊಬ್ಬನಲ್ಲವಾ?



# ವಾರ್ತಾಲಹರಿ

### ನಗರನಿರ್ಮಾಣವೇತ್ತರ ಸಮಾವೇಶ

ಯಾತ್ರಿಕರ ಸಮಸ್ಯೆಗಳನ್ನು ಪರಿಷ್ಕರಿಸಿ, ಆವಾಸ ವಾಹನ, ದರ್ಶನಾದಿಗಳಲ್ಲಿ ಶ್ರಮೆ ತಗ್ಗಿಸಲು ದೇವಸ್ಥಾನವು ಪ್ರಯತ್ನಿಸುತ್ತಿರುವುದು ಸರ್ವಜನವಿದಿತ. ಎಂತಹ ಪ್ರಯತ್ನಿಸಿದರು. ದಿನ ದಿನಕ್ಕೆ ಅಧಿಕವಾಗುತ್ತಿರುವ ಯಾತ್ರಿಕಜನರ ಕಾರಣವಾಗಿ, ಈ ಸೌಕರ್ಯಗಳನ್ನು ಹೊಸ ದೃಷ್ಟಿಕೋಣದಿಂದ ಗಮನಿಸಿ ಪರಿಷ್ಕರಿಸಲಾವಶ್ಯಕವಾಯಿತು. ಆದುದರಿಂದ, ದೇವಸ್ಥಾನವು ಈ ತಿಂಗಳು 12, 13 ರಂದು ನಗರ ನಿರ್ಮಾಣದಲ್ಲಿ ನಿಪುಣರ ಸಮಾವೇಶವೊಂದನ್ನು ತಿರುಮಲೆಯಲ್ಲಿ ನಿರ್ವಹಿಸುತ್ತಿದೆ. ಯಾತ್ರಿಕರ ಕ್ಯೂ ಸಮಸ್ಯೆಗಳನ್ನು ಪರಿಷ್ಕರಿಸುವುದು, ವಿಕ್ರಯಕೇಂದ್ರಗಳನ್ನು, ಬಸ್ಸುನಿಲ್ದಾಣಗಳನ್ನು ಏರ್ಪಾಟುಮಾಡುವುದು ಮುಂತಾದವುಗಳು ಪ್ರಧಾನವಾಗಿ ನಿರ್ಣಯಿಸಲ್ಪಡಲಾಗಿವೆ. ಇವನ್ನು ಪರಿಷ್ಕರಿಸಿ, ತಿರುಮಲೆಯನ್ನು ಆದರ್ಶಪ್ರಾಯವಾದ ನಗರವಾಗಿ ರೂಪಿಸುವುದು ಈ ಸಮಾವೇಶದ ಮುಖ್ಯೋದ್ದೇಶ್ಯ.

* * * *

### ಹೊಸ ಸಾರಿಗೆಸೌಕರ್ಯ

ಒಂದೆರಡು ವರ್ಷಗಳ ಹಿಂದೆವರೆಗೆ, ದೇವಸ್ಥಾನವು ಆಂಧ್ರಪ್ರದೇಶದಲ್ಲಿನ ವಿಜಯವಾಡ, ಮದ್ರಾಸು ರೈಲುಮಾರ್ಗದಲ್ಲಿದ್ದ ಗೂಡೂರಿನಿಂದ ತಿರುಮಲೆಗೆ ದೇವಸ್ಥಾನದ ಸಾರಿಗೆಸೌಕರ್ಯವನ್ನು ನಿರ್ವಹಿಸಿದ್ದುದು ನಮ್ಮ ಪಾಠಕರಿಗೆ ಗೊತ್ತಾಗಿರಬಹುದು. ದೇವಸ್ಥಾನವು 25—6—75 ನಿಂದ ಪುನಃ ಗೂಡೂರಿನಿಂದ ತಿರುಮಲೆಗೆ ಬಸ್ಸುಗಳನ್ನು ನಡೆಸುತ್ತಿದೆ. ಇದರಿಂದ ಕಲಕತ್ತಾ, ದೆಹಲೀ ಮುಂತಾದ ಪ್ರದೇಶಗಳಿಂದ ಬರುವ ಯಾತ್ರಿಕರಿಗೆ ಬಹಳ ಸೌಕರ್ಯವೇರ್ಪಡುತ್ತದೆ. ಈ ಬಸ್ಸುಗಳು ಗೂಡೂರಿನಿಂದ ಬೆಳಗ್ಗೆ 4–00; 9–40 ಮಧ್ಯಾಹ್ನ 13–30 ಮತ್ತು 16–30 ಗಳಿಗೂ, ತಿರುಮಲೆಯಿಂದ ಬೆಳಗ್ಗೆ 5–00; 8–40; 14–20; 17–40 ಗಂ|| ಈ ಸಮಯಗಳಲ್ಲಿ ಹೊರಡುತ್ತವೆ. ಗೂಡೂರಿನಿಂದ ತಿರುಮಲೆಗೆ ಟಿಕ್ಕೆಟ್ಟು ಬೆಲೆ ರು 6-75 ಗಳು.

* * * *

### ತಿರುಮಲೆಯಲ್ಲಿ ಪವಿತ್ರೋತ್ಸವ

ತಿರುಮಲೆಯಲ್ಲಿನ ಶ್ರೀವೇಂಕಟೇಶ್ವರಸ್ವಾಮಿಯವರ ವಾರ್ಷಿಕ ಪವಿತ್ರೋತ್ಸ ಬಹಳ ವಿಜೃಂಭಣೆಯಿಂದ, ಶಾಸ್ತ್ರೋಕ್ತ ಹೋಮಾದಿ ಕಾರ್ಯಕ್ರಮಗಳೊಂದಿಗೆ 17—8—75 ರಿಂದ 19—8—75 ವರೆಗೆ ನಡೆಯಲಿದೆ.

ಶ್ರೀ ಸ್ವಾಮಿಯವರು, ಮತ್ತು ದೇವೇರಿಗಳ ಉತ್ಸವಮೂರ್ತಿಗಳು ಈ ಮೂರು ದಿನಗಳೂ, ದೇವಾಲಯದಲ್ಲಿರುವ ಕಲ್ಯಾಣಮಂಟಪದಲ್ಲೇರ್ಪಾಟು ಮಾಡಲ್ಪಟ್ಟ ಯಾಗಶಾಲೆಯಲ್ಲೇ ಇದ್ದು ಮೂರನೆಯ ದಿನದ ಪೂರ್ಣಾಹುತಿ ಯನಂತರವೇ ಮೂಲಸ್ಥಾನವನ್ನು ಸೇರುತ್ತವೆ.

ಮೊದಲನೆಯ ದಿನ, ನೂಲು ಅಲ್ಲದೆ ಪಟ್ಟುದಾರಗಳಿಂದ, ತುಲಸಿ ಪೂಸೆ ಅಲ್ಲದೆ, ತಾಮರ ಪೂಸೆಗಳ ಆಕಾರದಲ್ಲಿ ತಯಾರಿಸಲ್ಪಟ್ಟ ಪವಿತ್ರಗಳು ಯಾಗಶಾಲೆಯಲ್ಲಿ ಇರಿಸಲ್ಪಡುತ್ತವೆ. ಎರಡನೆಯದಿನ ಈ ಪವಿತ್ರಗಳು ಮಂತ್ರಪಾಠಗಳನಡುವೆ ಮುಖ್ಯಾಲಯಕ್ಕೆ ಮತ್ತು ಬೇಡಿ ಆಂಜನೇಯಸ್ವಾಮಿ ಮಂದಿರದ ನಡುವೆ ಇರುವ ಪ್ರಧಾನ ಮತ್ತು ಪರಿವಾರ ದೈವಗಳಿಗೆ ಸಮರ್ಪಿಸಲ್ಪಡುತ್ತವೆ. ಮೂರನೆಯದಿನ ಪವಿತ್ರ ವಿಸರ್ಜನೆ ಮತ್ತು ಪೂರ್ಣಾಹುತಿ ನಡೆಯುತ್ತವೆ. ಈ ಉತ್ಸವದಿನಗಳಲ್ಲಿ ಬೇರೆ ಯಾವ ವಿಧವಾದ ಆರ್ಜಿತ ಸೇವೆಗಳು ಅನುಮತಿಸಲ್ಪಡುವು

ದಿಲ್ಲ. ರು 1,500/- ಪವಿತ್ರೋತ್ಸವಕ್ಕಾಗಿ ಹಣ ಸಲ್ಲಿಸಿದ ಗೃಹಸ್ಥರುಮಾತ್ರ ಈ ಉತ್ಸವಗಳಲ್ಲಿ ಭಾಗ ವಹಿಸಬಹುದು.

ಈ ಉತ್ಸವ ಶಕವರುಷ 1385 ರಂದು ಆರಂಭವಾದರೂ, 1962 ನಲ್ಲೇ ಪುನಃಪ್ರಾರಂಭಿಸಲ್ಪಟ್ಟ ಬಂದಿತೆಂದು ತಿಳಿದುಬರುತ್ತದೆ. ಈ ಉತ್ಸವವನ್ನು ನಡೆಸದೆ ಇದ್ದರೆ ದೇಶಕ್ಕೆ ಹಾನಿ ಉಂಟಾಗುವುದೆಂಬ ನಂಬಿಕೆ ಇದೆ.

* * * *

ಕಾಳಹಸ್ತಿ ತಿರುತ್ತಣಿಗಳಲ್ಲಿ ತನಗಿದ್ದ ಧರ್ಮಶಾಲೆ ಮತ್ತು ಸಮಾಚಾರಕೇಂದ್ರಗಳ ನಿರ್ವಹಣೆಯನ್ನು ಕಾಳಹಸ್ತೀಶ್ವರ, ಸುಬ್ರಮಣ್ಯೇಶ್ವರ ದೇವಸ್ಥಾನಗಳಿಗೆ ತಿರುಮಲೆ ತಿರುಪತಿ ದೇವಸ್ಥಾನ ಒಪ್ಪಿಸಿತು.

* * * *

ದೇವಸ್ಥಾನದ ಪ್ರಸಾರ ಶಾಖಾಧಿಕಾರಿಯಾಗಿದ್ದ ಶ್ರೀ ಪಿ. ಕನಕಭೂಷಣಂ ಅವರು, ಸಾರಿಗೆ ವಿಭಾಗದ ಜನರಲ್ ಮೇನೇಜರಿನ ಪರ್ಸನಲ್ ಆಫೀಸರಾಗಿ ನಿಯಮಿಸಲ್ಪಟ್ಟರು.

ಶ್ರೀ ನಾಸರರಾವವರು ಆಂಧ್ರಪ್ರದೇಶ್ ಸರ್ಕಾರದವರಿಂದ ಬದಲೀಯಾಗಿ ದೇವಸ್ಥಾನದಲ್ಲಿ ಎಗ್ಸಿಕ್ಯೂಟಿವ್ ಇಂಜನೀಯರಾಗಿ ನಿಯಮಿಸಲ್ಪಟ್ಟರು.

ಶ್ರೀ ವೈ. ವಿ. ಸುಬ್ರಹ್ಮಣ್ಯ ಅವರು, ಆಂಧ್ರಪ್ರದೇಶ ವಿದ್ಯಾವಿಭಾಗದಿಂದ ಬದಲಾಯಿಸಲ್ಪಟ್ಟ ದೇವಸ್ಥಾನದ ವಿದ್ಯಾಶಾಖಾಧಿಕಾರಿಯಾಗಿ ನಿಯಮಿಸಲ್ಪಟ್ಟರು.

### ವಿ ತ ರ ಣೆ

ಇತ್ತೀಚೆಗೆ ದೇವಸ್ಥಾನದವರಿಂದ ಸ್ಥಾಪಿಸಲ್ಪಟ್ಟ ಮೂಕಬಧಿರಾಂಧ ವಿದ್ಯಾಶಾಲೆಗೆ ಧಾರ್ಮಿಕರ ವಿರಾಳಗಳು ಬಹಳ ಹೆಚ್ಚಾಗಿ ಬರುತ್ತಿವೆ. ದೇವಸ್ಥಾನದ ಧಾರ್ಮಿಕ ಕಾರ್ಯಕ್ರಮದಲ್ಲಿ ಭಾಗವಹಿಸ ಲಿಚ್ಛಿಸುವ ಮಹನೀಯರು ತಮ್ಮ ವಿರಾಳಗಳನ್ನು ಪ್ರತ್ಯೇಕಾಧಿಕಾರಿ ಮೂಕಬಧಿರಾಂಧ ಪಾಠಶಾಲೆ. ತಿರುಪತಿ ಎಂಬ ವಿಲಾಸಕ್ಕೆ ಕಳುಹಿಸಬಹುದು.

---

## ಎಚ್ಚರಿಕೆ.

ತಿರುಮಲ ತಿರುಪತಿ ಶ್ರೀ ವೇಂಕಟೇಶ್ವರಸ್ವಾಮಿಯವರ ಪೂಜಾದಿ ಸೇವೆಗಳಿಗಾಗಲಿ, ಇತರ ಕಾಣಿಕೆಗೋಸ್ಕರವಾಗಲಿ, ಹಣ ಮತ್ತು ಇತರ ವಸ್ತುಗಳನ್ನು ಅಂಚೆಮೂಲಕ ಕಳುಹಿಸಬೇಕಾಗಿದ್ದಲ್ಲಿ ಅಂಥಹ ಹಣ ಮತ್ತು ವಸ್ತುಗಳನ್ನು "ಎಗ್ಸಿಕ್ಯೂಟಿವ್ ಆಫೀಸರ್, ತಿರುಮಲ-ತಿರುಪತಿ ದೇವಸ್ಥಾನಗಳು, ತಿರುಪತಿ ಪೋಸ್ಟು, ಚಿತ್ತೂರು ಡಿಸ್ಟ್ರಿಕ್ಟು" ಎಂಬ ವಿಳಾಸಕ್ಕೆ ಬರೆದು ಕಳುಹಿಸಬೇಕು.

ದಾವಣಗೆರೆಯ ಸಮಾಚಾರ ಕೇಂದ್ರದ ಶ್ರೀ ವೆಂಕಟೇಶ್ವರ ಸುಪ್ರಭಾತ ಸ್ಪರ್ಧೆ

# ಬಹುಮಾನ ವಿನಿಯೋಗ ಸಮಾರಂಭ

ತಾ|| 5–2–75 ರಂದು ದಾವಣಗೆರೆಯಲ್ಲಿ ಸಮಾರಂಭವು ಬಹು ವಿಜೃಂಭಣೆಯಿಂದ ನೆರವೇರಿಸಲಾಯಿತು. ಮೈಸೂರು ಶ್ರೀ ರಾಮಕೃಷ್ಣ ಆಶ್ರಮದ ಅಧ್ಯಕ್ಷರಾದ ಪರಮ ಪೂಜ್ಯ ಶ್ರೀ ಶ್ರೀ ಸೋಮನಾಥಾನಂದ ಸ್ವಾಮೀಜಿಯವರು ಕೃಪೆಮಾಡಿ ಸಮಾರಂಭಕ್ಕೆ ದಯಮಾಡಿಸಿ ತಮ್ಮ ಆಶೀರ್ವಾದಗಳೊಡನೆ ವಿಜೇತರಿಗೆ ಬಹುಮಾನಗಳನ್ನು ಅನುಗ್ರಹಿಸಿದರು. ಅನಂತರ ಭಕ್ತವೃಂದಕ್ಕೆ ಉಪದೇಶ ಭಾಷಣವನ್ನು ಈ ರೀತಿ ಕೃಪೆ ಮಾಡಿದರು.

"ಈಗ ಸುತ್ತೆಲ್ಲ ನೋಡಿದರೂ ಅಂಧಕಾರವೇ ಕಾಣುತ್ತದೆ. ಇದಕ್ಕಾಗಿ ಯಾರು ಅಧೈರ್ಯಪಡ ಬೇಕಾಗಿಲ್ಲ. ಶ್ರೀರಾಮಕೃಷ್ಣರ – ವಿವೇಕಾನಂದರ ವಾಣಿಯಂತೆ ದೇಶ ನಡೆಯ ಬೇಕು. ಜನ ಜಾಗೃತವಾಗ ಬೇಕು. ದೇಶದಲ್ಲಿ ನೀತಿಯ ಮಟ್ಟ ಊರ್ಜಿತವಾಗ ಬೇಕಾದರೆ ಪ್ರತಿ ಪ್ರಜೆಯ ಧರ್ಮಶ್ರದ್ಧೆಗಳು ಜಾಗೃತವಾಗ ಬೇಕು.

ಮಾನವ ದೇವತ್ವದ ಕಡೆಗೆ ಹೋಗುವ ಹಲವುದಾರಿಗಳನ್ನು ಸುಂದರವಾಗಿ ನಿರೂಪಿಸಿ ಜ್ಞಾನ, ಭಕ್ತಿ, ಕರ್ಮ ಮಾರ್ಗಗಳ ವಿಶ್ಲೇಷಣೆಮಾಡಿ "ಜೀವಿ" ಯಾವುದೊಂದು ಮಾರ್ಗವನ್ನು ಹಿಡಿದು ಶ್ರದ್ಧೆ ತೋರಿದರೆ ಸಾಕು ಭಗವಂತನೇ ಭಕ್ತನಿಗಾಗಿ ಮುಂದೆ ಒಂದು ಕಾಲ ಕಾಲಕ್ಕೆ ಸಹಾಯ, ಸಲಕರಣೆಗಳನ್ನೂ ಒದಗಿಸಿ ಭಕ್ತನನ್ನು ಉದ್ಧರಿಸುತ್ತಾನೆ" ಎಂದರು.

ಮಾನವನ ಆತ್ಮಶಕ್ತಿಯನ್ನು ವಿವರಿಸುತ್ತಾ "ಮನಸ್ಸಿನ ಏಕಾಗ್ರತೆಯನ್ನು ಸಾಧಿಸಿದಲ್ಲಿ ಲೋಕನನ್ನೇ ಗೆಲ್ಲಬಲ್ಲ. ಮನಃಶ್ಶಕ್ತಿ ಸಾಮಾನ್ಯವಾದದ್ದಲ್ಲ. ಜೋಗ್ ಜಲಪಾತದಲ್ಲಿ ಉತ್ಪತ್ತಿಯಾಗುವ ಎಲ್ಲಾ ವಿದ್ಯುತ್ ಶಕ್ತಿಗಿಂತಲೂ ಮಿಗಿಲಾದದ್ದು. ಇದಕ್ಕಾಗಿ ಸತತಸಾಧನೆ ಏಕಾಗ್ರತೆಗಳನ್ನು ರೂಢಿಸಿಕೊಳ್ಳಬೇಕು. ಇದರಿಂದಾಗಿ ಮಾನವ ಪರಬ್ರಹ್ಮನೊಡನೆ ಏಕವಾಗುವ ಹಂಥವನ್ನು ಸುಲಭವಾಗಿ ಮುಟ್ಟಬಲ್ಲ".

ಎಲ್ಲರೂ ನಿತ್ಯ ಜೀವನದಲ್ಲಿ ನಾಮ ಸ್ಮರಣೆ, ಜಪ, ತಪಗಳಿಂದ ಭಕ್ತಿ. ಜ್ಞಾನ, ವೈರಾಗ್ಯಗಳನ್ನು ಬೆಳಸಿಕೊಳ್ಳ ಬೇಕು." ಎಂಬುದಾಗಿ ಅಪ್ಪಣೆ ಕೊಡಿಸಿದರು.

ಸಮಾರಂಭವು ಸಂಜೆ 6–30 ರಿಂದ ಶ್ರೀಮತಿ ಚನ್ನಬಸಮ್ಮ ಮೋತಿವೀರಪ್ಪ ಕಲ್ಯಾಣ ಮಂಟಪದಲ್ಲಿ ನಡೆಯಿತು. ಸ್ವಾಗತಭಾಷಣ ಮಾಲಾರ್ಪಣೆಯಿಂದ ಪ್ರಾರಂಭವಾಗಿ ರಾತ್ರಿ 9 ಕ್ಕೇ ಮಂಗಳವಾಗಿ ಪ್ರಸಾದ ವಿನಿಯೋಗವಾಯಿತು. ಸಭಾಭವನದ ಒಳಗೆ ಹೊರಗೆ ಕಿಕ್ಕಿರಿದು ತುಂಬಿದ್ದ ಭಕ್ತವೃಂದವು ಶ್ರೀ ಸ್ವಾಮೀಜಿಯವರ ಭವ್ಯ ಉಪದೇಶಾಮೃತದಿಂದ "ಪುನೀತರಾದೆವು–ಜನ್ಮ ಸಾರ್ಥಕವಾಯಿತು" ಎಂದೆನುತ್ತಾ ಭಕ್ತಿ ಭಾವದಿಂದ ನಮಿಸಿ ಶ್ರೀ ಸ್ವಾಮಿಜಿಯವರನ್ನು ಬೀಳ್ಕೊಟ್ಟರು.

ಶ್ರೀ ಶುಭಮಸ್ತು

# ಆಡಳಿತ ಮಂಡಲಿಯ ತೀರ್ಮಾನಗಳು

ತಾಳ್ಳಪಾಕ ಅನ್ನಮಾಚಾರ್ಯರ ಕೀರ್ತನೆಗಳನ್ನು ಕುಮಾರಿ ಶ್ರೀರಂಗಂ ಗೋಪಾಲರತ್ನಂ, ಶ್ರೀ ಈಮನಿ ಶಂಕರ ಶಾಸ್ತ್ರಿಗಳ ಮೂಲಕ ಗ್ರಾಮಫೋನ್ ರಿಕಾರ್ಡುಗಳು ತಯಾರಿಸಿ ಪ್ರಸಾರಮಾಡಲು ನಿರ್ಣಯವಾಯಿತು. ಇದಕ್ಕಾಗಿ ರು 17,210/- ಮಂಜೂರು ಮಾಡಲ್ಪಟ್ಟವು.

ಯಾತ್ರಿಕರ ಸೌಕರ್ಯಕ್ಕಾಗಿ ದೇವಸ್ಥಾನವು ಕಾಶೀಯಲ್ಲಿ ಒಂದು ಭವನವನ್ನು ನಿರ್ಮಿಸಲು, ಅಥವಾ ಭವನವನ್ನ ಕೊಳ್ಳಲು ನಿಶ್ಚಯಿಸಿದರು.

ದೇವಸ್ಥಾನದ ಆಡಳಿಕೆಯಲ್ಲಿರುವ ಶ್ರೀ ವೇಂಕಟೇಶ್ವರ ಬಾಲಮಂದಿರಕ್ಕೆ ಈ ಕೆಳಗಿನ ಸದಸ್ಯರುಕೂಡಿದ ಸ್ಥಳೀಯ ಸಲಹೆಯಮಂಡಲಿ ನಿಯಮಿಸಲ್ಪಟ್ಟಿತು.

"ಶ್ರೀ ಯಮ್. ಅನಂತಶಯನಂ ಅಯ್ಯಂಗಾರ್; ಶ್ರೀ ಯಮ್. ಬಲರಾಮಿರೆಡ್ಡಿ; ಡಾ. ಜಿ. ಶಿವಶಂಕರ ರಾವ್; ಉಪಕಾರ್ಯನಿರ್ವಾಹಕ ಅಧಿಕಾರಿ, ದೇವಸ್ಥಾನ ವಿದ್ಯಾಧಿಕಾರಿ; ಶ್ರೀಮತಿಯರು ಸಿ. ಹೆಚ್. ಸಂತೋಷಂ, ಕಿಜ್ಜಮ್ಮ. ಈ ಮಂಡಳಿ ಮೂರುವರುಷಗಳಕಾಲ ಅಧಿಕಾರದಲ್ಲಿರುವುದು.

ಹೈದರಾಬಾದ್‌ನಲ್ಲಿನ ಶ್ರೀ ವೇಂಕಟೇಶ್ವರ ವೇದಾಂತವರ್ಧಿನೀ ಸಂಸ್ಕೃತಕಳಾಶಾಲ 'ಮಾಶಾಬ್‌ಟಾಂಕ್' ಪ್ರದೇಶದಿಂದ, ಪತಂಜಲಿ ಯೋಗವಿದ್ಯಾಕೇಂದ್ರವುಳ್ಳ ಭವನಕ್ಕೆ ಬದಲಾಯಿಸಲ್ಪಟ್ಟಿತು.

ಶ್ರೀ ಟಿ. ಕೆ. ಟಿ. ವೀರರಾಘವಾಚಾರ್ಯ, ಶ್ರೀ ಯಸ್: ಕೃಷ್ಣಸ್ವಾಮಿ ಅಯ್ಯಂಗಾರರಿಂದ ಬರೆದಲ್ಪಟ್ಟದ್ದ 'ತಿರುಪತಿಚರಿತ್ರೆ' (ಇಂಗ್ಲೀಷು) ಗ್ರಂಥಗಳನ್ನು ಪುನಃಮುದ್ರಿಸಲು ರು 21,842/- ಮಂಜೂರು ಮಾಡಲ್ಪಟ್ಟವು.

ಶ್ರೀ ವೇಂಕಟೇಶ್ವರ, ಪದ್ಮಾವತೀದೇವಿ, ಮತ್ತು ಶ್ರೀ ವೇಂಕಟೇಶ್ವರಪದ್ಮಾವತೀದೇವಿಯರ ಸಂಯುಕ್ತ ಚಿತ್ರಗಳನ್ನು ಎನಾಮಿಲ್ ರೇಕುಗಳಮೇಲೆ ತಯಾರಿಸಿ ವಿಕ್ರಯಿಸಲು ರು 1,00,000/- ಮಂಜೂರಾಗಿವೆ.

ಆಂಧ್ರಪ್ರದೇಶದಲ್ಲಿನ ಶ್ರೀಕಾಕುಳಂ ಜಿಲ್ಲೆಯಲ್ಲಿ ಇರುವ ದೋನ್‌ಬಾಯಿ ಚಿಲಕಂ ಎಂಬ ಗ್ರಾಮಗಳಲ್ಲಿ ಆಲಯಗಳನು ನಿರ್ಮಿಸುವುದಕ್ಕೆ ರು 13,600/- ಮಂಜೂರು ಮಾಡಲ್ಪಟ್ಟವೆ.

ದೇವಸ್ಥಾನದ ಘಾಟ್‌ರೋಡ್‌ಗಳಮೇಲೆ M. S. ರೈಲಿಂಗ್‌ಗಳನ್ನು ಏರ್ಪಾಟುಮಾಡಿ ರಕ್ಷಣ ಕೊಡಲು ಮತ್ತು ಇದಕ್ಕೆ ಬೇಕಾದ ಕಂಬಿಗಳನ್ನು ರೈಲ್ವೇಇಲಾಖೆಯವರಿಂದ ಕೊಳ್ಳಲು ನಿರ್ಣಯಿಸಿತು.

ಭವನಗಳ ನಿರ್ಮಾಣಗಳಲ್ಲಿ ನಿಪುಣರಾದವರ ಸಮಾರೋಹಕ್ಕಾಗಿ ರು 15,000/- ಮಂಜೂರು ಮಾಡಲ್ಪಟ್ಟವೆ.

ನಾಲ್ಕು ಕೊಠಡಿಗಳುಳ್ಳ ಭವನಗಳನ್ನು (Cottage) ನಿರ್ಮಿಸಲು ವೊಂದು ಕೊಟಕಗೆ ರು 7,500, ಎರಡು ಕೊಠಡಿಗಳ್ಳು ಅಲ್ಲದೆ ಅರ್ಧ ಕಾಟೇಜ್ ನಿರ್ಮಾಣಕ್ಕೆ ರು 15,000 ಪೂರ್ತಿ ಭವನದ ನಿರ್ಮಾಣಕ್ಕೆ ರು 30,000 ವಿರಾಳವಾಗಿ ಸ್ವೀಕರಿಸಲು ನಿಶ್ಚಯಿಸಲ್ಪಟ್ಟದೆ.

ಮದರಾಸಿನಳ್ಳಿನ ದೇವಸ್ಥಾನಸಮಾಚಾರಕೇಂದ್ರದಲ್ಲಿನ ಕಲ್ಯಾಣಮಂಟಪವನ್ನು ಧಾರ್ಮಿಕ, ಮತ, ತತ್ ಸಂಬಂಧವಾದ ಕಾರ್ಯಕ್ರಮಗಳಕ್ಕೆ ರು 50/- ಲು ದರಮೆಳ್ಳೆ ಕೊಡುವದಕ್ಕಾಗಿ ನಿರ್ಣಯವಾಯಿತು (ಲಯಿಟು ಮತ್ತು ಲವ್‌ಡ್‌ಸ್ಪೀಕರುಗಳ ಸೌಕರ್ಯ ಮಾಡಲ್ಪಡುವುದು)

ಮದ್ರಾಸುನಲ್ಲಿ ಒಂದು ಸ್ಥಳವನ್ನು ಸೇಕರಿಸಿಕೊಂಡು ವಿದ್ಯಾಲಯ ಭವನ ನಿರ್ಮಿಸುವುದಕ್ಕೆ ಆಂಧ್ರಪ್ರದೇಶದ ಸರ್ಕಾರದವರು ಮತ್ತು ದೇವಸ್ಥಾನ

ಸಗಭಾಗ ಭರಿಸುವ ಪದ್ಧತಿಮೇಲೆ ಯುಕ್ತಿಸಲು ನಿರ್ಣಯ ವಾಯಿತು.

ಬರುವ ವಿದ್ಯಾಸಂವತ್ಸರದಲ್ಲಿ (Acadamic year) B. A. ಶಾಸ್ತ್ರಗಳ ಬೋಧನೆಯಲ್ಲಿ ಜ್ಯೋತಿಷ್ಯವು ಪ್ರಾರಂಭಿಸಲ್ಪಡುತ್ತದೆ.

ದೇವಸ್ಥಾನವು ಶ್ರೀ ವೇಂಕಟೇಶ್ವರ ವಿಶ್ವವಿದ್ಯಾನಿಲಯಕ್ಕೆ 75-76 ಸಂವತ್ಸರಗಳಲ್ಲಿ ಕೊಡಬೇಕಾಗಿದ 3 ಲಕ್ಷ ರೂಪಾಯಿಗಳ ವಿರಾಳವಲ್ಲಿ ರು 50,000-48 ಪೈ. ವಿನಾಕೊಂಡು ಮಿಕ್ಕ ಹಣವನ್ನು ಕೊಡಲು ನಿಶ್ಚಯಿಸಿದರು.

ದೇವಸ್ಥಾನ ಕೋ-ಆಪರೇಟಿವ್ ಸ್ಟೋರಿನ ಪಾಲಕತಮಂಡಲಿಯಲ್ಲಿ [illegible] ಪಾಲಕತಮಂಡಳಿಯ ಸದಸ್ಯನಾಗಿ ಶ್ರೀ [illegible], ಶ್ರೀ ಎಲ್. ನಾರಾಯಣ [illegible] ನಿಯಮಿಸಿದರು.

ಶ್ರೀ [illegible] ವಿದ್ಯಾಲಯ ಮತ್ತು ಅವರ ವಿದ್ಯಾ[illegible] ಶ್ರೀ ವೇಂಕಟೇಶ್ವರ ಜೂನಿಯರ್ [illegible] ಭವನಗಳು ನಿರ್ಮಿಸಲು ನಿರ್ಣಯವಾಯಿತು.

ಆಂಧ್ರಪ್ರದೇಶದಲ್ಲಿ ವಿವಿಧ ಜಿಲ್ಲೆಗಳ, ಕೇಂದ್ರಗಳ [illegible] ಜನರು ಸ್ಥಳವನ್ನುಚಿತವಾಗಿ ಕೊಟ್ಟರೆ ಆ ಸ್ಥಳಗಳಲ್ಲಿ 7 ಲಕ್ಷಗಳ ಹೆಚ್ಚಾಗವ ವ್ಯಯದಲ್ಲಿ ಕಲ್ಯಾಣಮ[illegible] ಮತ್ತು ಸಮಾಚಾರ ಕೇಂದ್ರಗಳನ್ನು ನಿರ್ಮಿಸಲು ನಿಶ್ಚಯಿಸಲ್ಪಟ್ಟಿದು.

ಹಿರಿಯ ಜಿಯ್ಯಂಗಾ[illegible] ಕಿರಿಯ ಜಿಯ್ಯಂಗಾರರಾಗಿ ನಿಯಮಿಸಲ್ಪಟ್ಟ ಶ್ರೀ ಟಿ. ಯಸ್. ರಾಮ ಜಿಯ್ಯಂಗಾರರವರಿಗೆ ಬೇಕಾದ ಗೌರವಮರ್ಯಾದೆಗಳನ್ನು ಸಲ್ಲಿಸಲು ಅಂಗೀಕರಿಸಲ್ಪಟ್ಟಿದೆ.

ಜೀರ್ಣೋದ್ಧಾರ ಕಾರ್ಯಕ್ರಮಕ್ಕಾಗಿ ಕೆಳಗಿನ ವಿವಿಧ ಸಂಸ್ಥೆಗಳಿಗೆ ವಿರಾಳವಾಗಿ ರು 15.000 ಲು (ಒಂದೊಂದಿಗೆ) ಮಂಜೂರು ಮಾಡಲ್ಪಟ್ಟಿವೆ.

1) ಮಹಂಕಾಳಿ ಮಂದಿರ,
ನಲ್ಲಕುಂಟ, ಹೈದರಾಬಾದ್.

2) ಪ್ರಸನ್ನ ನಂದರಾಜಸ್ವಾಮಿ ಆಲಯ,
ಶ್ರೀ ಕಾಳಹಸ್ತಿ.

3) ವೇಣುಗೋಪಾಲಸ್ವಾಮಿ ಆಲಯ,
ಮನ್ನನೂರು, ಮೊಹಬೂಬ್‌ನಗರ್ ಜಿಲ್ಲೆ.

4) ವೀರಭದ್ರಸ್ವಾಮಿ ಆಲಯ,
ರಾಯಚೋಟಿ.

5) ಪ್ರಸನ್ನಾಂಜನೇಯಸ್ವಾಮಿ ಸೇವಾಸಂಘವು,
A. T. ಅಗ್ರಹಾರ, ಗುಂಟೂರು.

6) ಸೀತಾರಾಮಸ್ವಾಮಿ ಆಲಯ,
ಮಾಧವಪುಲ್ಲಾರಿ, ಚಿತ್ತೂರು ಜಿಲ್ಲೆ.

7) ಶ್ರೀ ಸೀತಾರಾಮಮಂದಿರ,
ಗೇದಲಪಾರಿವಾಳೆಂ ವಿಶಾಖಪಟ್ಣಂ ಜಿಲ್ಲೆ.

8) ಶ್ರೀ ವೇಂಕಟೇಶ್ವರ ಆಲಯ,
ಎಲ್ಲಾರೆಡ್ಡಿಗೂಡ, ಹೈದರಾಬಾದ್.

9) ಪತಿತಪಾವನ ಪಟ್ಟಾಭಿರಾಮಾಲಯ,
ಹೇಗೂಡ, ಹೈದರಾಬಾದ್.

1) ಶ್ರೀ ಸೋಮೇಶ್ವರಸ್ವಾಮಿ ಆಲಯ,
ಸತ್ಯವಾಡ, ತೂರ್ಪುಗೋದಾವರಿ ಜಿಲ್ಲೆ —
ರು 10,000/—

2) ವರದರಾಜಸ್ವಾಮಿ ಆಲಯ,
ಕಾಂಚೀಪುರ — ರು 25,000/—

3) ಸತ್ಯನಾರಾಯಣ ಆಲಯ,
ಹೀರಮಂಡಲಂ, ಶ್ರೀಕಾಕುಳಂ ಜಿಲ್ಲೆ ರು 6,500/—

# ಸಂಸ್ಕೃತ - ಮೃತಭಾಷೆಯೇ?

ಶ್ರೀ ಕೆ. ವಿ. ಶ್ರೀನಿವಾಸ ಪ್ರಸಾದ್, B.SC., B.E.
561, ರಾಮಚಂದ್ರ ಅಗ್ರಹಾರ,
ಮೈಸೂರು – 570004

"ವಾಣ್ಯೇಕಾ ಸಮಲಂಕರೋತಿ ಪುರುಷಂ ಯಾ–
ಸಂಸ್ಕೃತಾ ಧಾರ್ಯತೇ"

ಸಂಸ್ಕೃತ ಎಂದರೆ (ಸಮ್ಯಕ್ ಕೃತಂ) ಒಪ್ಪವಾಗಿ ಅಣಿಯಾಗಿ ಮಾಡಲ್ಪಟ್ಟಿದ್ದು ಎಂದರ್ಥ. ಸಂಸ್ಕೃತ ಇಂದಿನ ಭಾಷೆಯಲ್ಲ. ಸಂಸ್ಕೃತವು ಬಹು ಪುರಾತನವಾದ ಭಾಷೆ. ಅತಿ ಪುರಾತನ ಗ್ರಂಥಗಳೆನಿಸಿದ ವೇದ, ಉಪನಿಷತ್ತುಗಳು ಈ ಭಾಷೆಯಲ್ಲಿಯೇ ಇವೆಯೆಂದರೆ ಸಂಸ್ಕೃತವು ಎಷ್ಟು ಹಿಂದೆಯೇ ರೂಢಿಯಲ್ಲಿತ್ತು ಎಂಬುದನ್ನರಿಯಬಹುದು. ಈ ಭಾಷೆಯು ಅತಿ ಸಂಪದ್ಭರಿತ ಭಾಷೆ. ಈ ಭಾಷೆಯಲ್ಲಿಲ್ಲದುದೇ ಇಲ್ಲವೆನ್ನಬಹುದು. ಪ್ರಾಚೀನ ಗ್ರಂಥಗಳೆನಿಸಿದ ವೇದ, ಪುರಾಣ, ಉಪನಿಷತ್ತುಗಳಲ್ಲದೇ, ಶಾಸ್ತ್ರವಿಚಾರಕ್ಕೆ ಸಂಬಂಧಪಟ್ಟ ಇತಿಹಾಸ, ಭೂಗೋಳ, ವಿಜ್ಞಾನ, ಜ್ಯೋತಿಷ, ಖಗೋಳ ಶಾಸ್ತ್ರಗಳೇ ಮೊದಲಾದವು ಈ ಭಾಷೆಯಲ್ಲಿವೆ ಎಂದರೆ ಸಂಸ್ಕೃತದ ವಿಶಾಲತೆ, ವೈಭವವೇನೆಂಬುದನ್ನು ತಿಳಿಯಬಹುದಲ್ಲವೇ? ಈ ಭಾಷೆ ಹೇಗೆ ಸಂಸ್ಕೃತವಾಯಿತೆಂಬುದನ್ನು ತಿಳಿಯುವುದು ಮುಖ್ಯವಲ್ಲವೆ?

ಬಹು ಹಿಂದೆ ಈ ಭಾಷೆ ಪ್ರಯೋಗದಲ್ಲಿದ್ದಾಗ, ಈಗಿರುವ ಕಟ್ಟುನಿಟ್ಟಾದ ವ್ಯಾಕರಣದ ಬಂಧನವಿರಲಿಲ್ಲ ಹಿಡಿತದಲ್ಲಿಲ್ಲದ ಈ ಭಾಷೆಯನ್ನು ಯಾರು ಬೇಕಾದರೂ ಸುಲಭವಾಗಿ ಆಡುವಂತಿತ್ತು. ಕಾಲ ಉರುಳಿದಂತೆ ಈ ಭಾಷೆಯ ಲಾಲಿತ್ಯವನ್ನು, ಸೌಂದರ್ಯವನ್ನು ಗಮನಿಸಿದ ಪಾಣಿನಿಯು ಇದಕ್ಕೆ ಹಲವು ನಿಯಮಗಳನ್ನು ಇಡಬೇಕೆಂದು ನಿರ್ಧರಿಸಿದನು. ಅದರ ಫಲವೇ ಸಂಸ್ಕೃತ ವ್ಯಾಕರಣ. ಇದಕ್ಕೆ ಪಾಣಿನೀಯ ಸಂಸ್ಕೃತ ವ್ಯಾಕರಣವೆಂದು ಹೆಸರು. ಆ ನಂತರ ಭಾಷೆಯ ಸೌಂದರ್ಯ ಗಾಂಭೀರ್ಯ ಇನ್ನೂ ಹೆಚ್ಚುತೊಡಗಿ, ಬಹುವಾಗಿ ಆಕರ್ಷಿಸಲ್ಪಡತೊಡಗಿತು.

ಭಾಷೆಯು ಬೆಳವಣಿಗೆ ಆದಂತೆಲ್ಲಾ, ಪ್ರಯೋಗ ಹೆಚ್ಚಿದಂತೆಲ್ಲಾ ವಿಶಾಲತೆ ಹೆಚ್ಚಿದಂತೆಲ್ಲಾ ಹೊಸ ಹೊಸ ಪದಗಳು ಸೃಷ್ಟಿಯಾಗತೊಡಗಿದವು. ಭಾಷೆಯು ಬೆಳೆಯುತೊಡಗಿತು. ಪದಗಳ ಅರ್ಥ ಸಾಮರ್ಥ್ಯ, ಸಂದರ್ಭಕ್ಕೆ ಅನುಸರಿಸಿ ಪ್ರಯೋಗಿಸುವಿಕೆ ಹೆಚ್ಚುತೊಡಗಿತು. ಇದರ ಪರಿಣಾಮವೇ ಪ್ರಖ್ಯಾತ ಅಮರಸಿಂಹನೆಂಬ ಕವಿಯ "ಅಮರಕೋಶ" ವೆಂಬ ಕೋಶದ ರಚನೆ. ಪದಗಳ ವಿವಿದಾರ್ಥ, ಸಮಾನಾರ್ಥಗಳ ಪದಸಮೂಹವನ್ನು ಅತಿ ಚೊಕ್ಕವಾಗಿ, ಒಪ್ಪವಾಗಿ ಅರ್ಪಿಸಿದ್ದಾನೆ, ಅಮರಸಿಂಹ. ನಾವು ಹೇಗೆ ಅರ್ಥವಾಗದ ಪದಗಳಿಗೆ "Dictionary" ನೋಡುವೆವೋ, ಹಾಗೆ ಸಂಸ್ಕೃತಜ್ಞರು ಅಮರಕೋಶವನ್ನು ನೋಡುತ್ತಾರೆ. ಬಹು ಇತ್ತೀಚೆಗೆ ರಚಿತವಾದ, ಸಮಾನವಾದ, ಹೆಚ್ಚಿನ ಪದಗಳನ್ನೂ, ಪದಗಳ ಅರ್ಥವನ್ನೂ ಉಳ್ಳ ಮತ್ತೊಂದು ಕೋಶವೆಂದರೆ ಯಾದವಪ್ರಕಾಶನೆಂಬ ಕವಿವರೇಣ್ಯರಿಂದ ರಚಿಸಲ್ಪಟ್ಟ "ವೈಜಯನ್ತೀ ಕೋಶ".

ಈ ಭಾಷೆಯ ಸಂಪತ್ತು ಭಾಷೆಬಲ್ಲವರಿಗೆ ಗೊತ್ತಾಗಬಲ್ಲುದೇ ವಿನಹ, ಭಾಷೆಯೇ ಬಾರದವರಿಗೆ ಅರ್ಥವಾಗುತ್ತದೆಯೇ? ಕಣ್ಣಿರುವವನಿಗೆ ಹೆಣ್ಣಿನ ಸೌಂದರ್ಯವಾಗಲೀ, ಪುಷ್ಪದ ಸೌಂದರ್ಯವಾಗಲೀ, ಪ್ರಕೃತಿಯ ರಮ್ಯತೆಯಾಗಲೀ ತಿಳಿಯ ಬಲ್ಲುದು. ಹುಟ್ಟು ಅಂಧನಾದವನಿಗೆ ಎಷ್ಟು ವರ್ಣಿಸಿದರೆ

ತಾನೇ ತಿಳಿಯಬಲ್ಲುದು. ಪುರಾಣ ಇತಿಹಾಸಾದಿಗಳು ಈ ಭಾಷೆಯಲ್ಲಿವೆ. ವಿಶ್ವವಿಖ್ಯಾತವಾಗಿರುವ ಭಾರತೀಯ ಸಂಸ್ಕೃತಿಯ ಹೆಗ್ಗುರುತುಗಳಾಗಿರುವ, ಭಾರತದ ಮಹಾಕಾವ್ಯಗಳಾದ ವಾಲ್ಮೀಕಿ ರಾಮಾಯಣ, ವ್ಯಾಸ ವಿರಚಿತ ಮಹಾಭಾರತ ಈ ಭಾಷೆಯಲ್ಲಿವೆ. ಕೇವಲ ಭಾಷಾಂತರದ ಅವಗಾಹನೆಯಿಂದಲೇ ಇಷ್ಟು ವಿಶ್ವಪ್ರೇಮಿಗಳಾಗಿರಬೇಕಾದರೆ, ಮೂಲಭಾಷೆಯಲ್ಲಿ ಓದಿದರೆ ಅದು ಇನ್ನೆಷ್ಟು ಚೆನ್ನಿರಬೇಕು?

ಸಂಸ್ಕೃತ ಭಾಷೆ ನಡೆದುಬಂದ ರೀತಿಯೇ ಒಂದು ಮೋಜು. ಈ ಭಾಷೆಯಿಂದ ಆಕರ್ಷಿತರಾಗದವರೇ ಇಲ್ಲವೇನೋ ಎನ್ನುವಂತಿದೆ. ಈ ಭಾಷೆಯನ್ನು ಆಳುವುದಕ್ಕಾಗಿ ಅಪೇಕ್ಷಿಸಿದವರೆಷ್ಟೋ ಮಂದಿ ವಿದ್ವಾಂಸರು. ಈಗ ಹೇಗೆ ಆಂಗ್ಲ ಭಾಷಾ ಸಾಮ್ರಾಜ್ಞರೆಂದು ಷೇಕ್ಸ್‌ಪಿಯರ್, ರಸ್ಸೆಲ್ ಮುಂತಾದ ಕವಿಗಳನ್ನು ಕರೆಯುತ್ತೇವೆಯೋ, ಹಾಗೆ ಅಂದಿನ ಸಂಸ್ಕೃತ ಭಾಷಾ ಸಾಮ್ರಾಟ್‌ಗಳಾಗಿದ್ದರು, ಕಾಳಿದಾಸ, ಭಾಸ ಬಾಣ, ಭವಭೂತಿ ಮುಂತಾದ ಕವಿವರೇಣ್ಯರು. ಕಾಳಿದಾಸನ ಕಾವ್ಯಗಳನ್ನು ಓದುತ್ತಿದ್ದರೆ ಓದುಗ ತನ್ನನ್ನು ತಾನೇ ಮರೆಯುವುದರಲ್ಲಿ ಸಂದೇಹವಿಲ್ಲ. ಸೊಗಸಾದ ವರ್ಣನೆಗಳಿಗೆ ಕಾಳಿದಾಸ ಬಹು ಪ್ರಸಿದ್ಧಿ. ಕಾಳಿಯ ವರ ಪುತ್ರನೆಂದು ಪ್ರಸಿದ್ಧನಾಗಿರುವ ಈತನಿಗೆ ವಿಕ್ರಮಾದಿತ್ಯ ಮಹಾರಾಜನ ಆಸ್ಥಾನದ ನವಮಣಿಗಳಲ್ಲಿ ಅದ್ವಿತೀಯ ಸ್ಥಾನ. ಮಹಾಕವಿಯೆಂಬ ಬಿರುದೂ ಕೂಡ. ಕಾಳಿದಾಸನ ಕೀರ್ತಿಯಿಂದ ಅಸೂಯೆಗೊಂಡವರೆಷ್ಟೋ ಮಂದಿಪಂಡಿತರು. ಒಬ್ಬ ಮಹಾ ಪಂಡಿತನು ಕಾಳಿದಾಸನನ್ನು ವಾದದಲ್ಲಿ ಸೋಲಿಸಲು ವಿಕ್ರಮಾದಿತ್ಯನ ಆಸ್ಥಾನಕ್ಕೆ ಹೇಳಿ ಕಳುಹಿಸುತ್ತಾನೆ. ಅವನ ಬರುವಿಕೆಯನ್ನು ಅರಿತ ಕಾಳಿದಾಸನು ಬೋಯಿಗಳಲ್ಲಿ ತಾನೂ ಸೇರಿಕೊಳ್ಳುತ್ತಾನೆ. ಪಲ್ಲಕ್ಕಿಯನ್ನು ಹೊತ್ತು ನಡೆಯುವಾಗ, ಬೇಕೆಂತಲೇ, ಓಲಾಡಿಸುತ್ತಾ ನಡೆಯುತ್ತಾನೆ. ಒಳಗೆ ಕುಳಿತಿದ್ದ ಕವಿಯು ಬಾಧೆಯನ್ನು ತಾಳಲಾರದೆ ಏಕೆ ಬಾಧಿಸುತ್ತೀಯೆಂದು ಪ್ರಶ್ನಿಸುತ್ತಾನೆ. ಹಾಗೆ ಪ್ರಶ್ನಿಸುವಾಗ "ಬಾಧತಿ" ಎಂಬ ತಪ್ಪು ಪ್ರಯೋಗವೊಂದನ್ನು ಅರಿಯದೆ ಮಾಡಿರುತ್ತಾನೆ. ತಕ್ಷಣ ಕಾಳಿದಾಸನು "ಬಾಧತಿ ಎಂಬ ತಪ್ಪುಪ್ರಯೋಗಕ್ಕಿಂತಲೂ ಈ ಬಾಧೆ ಹೆಚ್ಚು ಬಾಧಿಸುತ್ತದೆಯೇ ಎಂದು ಕೇಳಿದಾಗ, ನಾಚಿನೀರಾದ ಕವಿಯು ಕೇವಲ ಒಬ್ಬ ಬೋಯಿಯೇ ಇಷ್ಟು ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಪಡೆದಿರುವಾಗ ಇನ್ನು ಕಾಳಿದಾಸನೆಂತಿರಬೇಕೆಂದು ಊಹಿಸಿ ನೋಡಿ, ತಕ್ಷಣವೇ ಹೇಳದೆ ಕೇಳದೆ ತನ್ನ ಊರಿಗೆ ಪಲಾಯನ ಮಾಡುತ್ತಾನೆಂದು ಪ್ರತೀತಿ. ಅಷ್ಟು ಚಾಣಾಕ್ಷಮತಿಯೂ, ಪ್ರಚಂಡ ಸಂಸ್ಕೃತ ಪಂಡಿತನೂ ಆಗಿದ್ದ, ಕಾಳಿದಾಸ.

**"ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಂ ।**
**ದಂಡಿನಃ ಪದಲಾಲಿತ್ಯಂ ಮಾಘೇಸಂತಿ ತ್ರಯೋಗುಣಾಃ॥**

ಉಪಮೆಗಳಿಗೆ ಹೇಗೆ ಕಾಳಿದಾಸನು ಪ್ರಸಿದ್ಧನೋ, ಅಂತೆಯೇ ಅರ್ಥದ ಗೌರವಕ್ಕೆ ಭಾರವಿಯು, ಮೃದುವಾದ ಪದಗಳ ಪ್ರಯೋಗಕ್ಕೆ ದಂಡಿ ಎಂಬ ಕವಿಯು, ಈ ಎಲ್ಲ ಮೂರು ಗುಣಗಳನ್ನೂ ಹೊಂದಿದ್ದ ಮಾಘನೆಂಬ ಕವಿಯೂ ಪ್ರಸಿದ್ಧರು.

ಸಂಸ್ಕೃತಭಾಷೆಯನ್ನಾದರಿಸದ ಆಳುವ ದೊರೆಯಿರಲಿಲ್ಲ. ದೊರೆಯೆಂದರೆ ಸಂಸ್ಕೃತಜ್ಞನೆಂತಲೂ, ಸಂಸ್ಕೃತಜ್ಞರ ಪೋಷಕನೆಂತಲೂ ರೂಢಿ. ಆಸ್ಥಾನ ವಿದ್ವಾಂಸರಾಗ ಬೇಕಾಗಿದ್ದರೆ ಸಂಸ್ಕೃತದ ಪರಿಪೂರ್ಣವಾದ ಜ್ಞಾನವಿದ್ದಿರಬೇಕಾಗಿತ್ತು. ಇದಕ್ಕಾಗಿ ವಿದ್ವಾಂಸರು ಅನುಭವಿಸುತ್ತಿದ್ದ ಪಾಡೆಷ್ಟೋ? ವಾಗ್ಯುದ್ಧಗಳೆಷ್ಟೋ? ಕಾವ್ಯಗಳು, ಪ್ರತಿಕಾವ್ಯಗಳ ರಚನೆಯೆಷ್ಟೋ?

ಸಂಸ್ಕೃತ ಹಿಂದೆ ಆಡುಭಾಷೆಯಾಗಿದ್ದಿತೆಂಬುದಕ್ಕೆ, ದೈನಂದಿನ ಉಪಯೋಗದಲ್ಲಿದ್ದಿತೆಂಬುದಕ್ಕೆ ಅನೇಕ ನಿದರ್ಶನಗಳುಂಟು. ಕಾಳಿದಾಸನ ಕಾಲದಲ್ಲಿ ಗ್ರಾಮದ ಮಹಿಳೆಯರೂ ಕೂಡ ಸಂಸ್ಕೃತದಲ್ಲಿ ಸುಲಭವಾಗಿ ವ್ಯವಹರಿಸಬಲ್ಲವರಾಗಿದ್ದರೆಂಬುದಕ್ಕೆ ಕಾಳಿದಾಸನು ನಡೆಸಿದ ವಾಗ್ವಿವಾದಗಳೂ, ಸಂಭಾಷಣೆಗಳ ಉಲ್ಲೇಖವು ಸಹಕಾರಿಯಾಗಿದೆ. ದೊರೆಯರು ಆಸ್ಥಾನದಲ್ಲಿ ಕೇವಲ ಸಂಸ್ಕೃತದಲ್ಲಿಯೇ ವ್ಯವಹರಿಸುತ್ತಿದ್ದರೆಂಬುದಕ್ಕೆ ಆ ರಾಜಾಸ್ಥಾನದಲ್ಲಿ ನಡೆಯುತ್ತಿದ್ದ ವಾಗ್ವಿವಾದಗಳ ಉಲ್ಲೇಖವು ಸಹಾಯವಾಗುತ್ತದೆ. ಇತ್ತೀಚಿನ,

ಆಚಾರ್ಯರುಗಳಾದ, ಮತಸ್ಥಾಪಕರುಗಳಾದ ರಾಮಾನುಜ, ಶಂಕರಾಚಾರ್ಯರೇ ಮೊದಲಾದ ಆಚಾರ್ಯರು ಇಡೀ ಭಾರತದಲ್ಲಿ ಸಂಚರಿಸಿ, ತಮ್ಮ ತಮ್ಮ ಮತದ ಪ್ರಚಾರಮಾಡಿರಬೇಕಾದರೆ, ಅವರ ಕಾಲದಲ್ಲಿಯೂ ಕೂಡ ಸಂಸ್ಕೃತ ವ್ಯಾವಹಾರಿಕವಾಗಿ ಉಪಯೋಗದಲ್ಲಿತ್ತೇನೋ ಎನಿಸುತ್ತದೆ.

ಇಷ್ಟೊಂದು ಅಪಾರ ಜ್ಞಾನಸಂಪತ್ತುಳ್ಳ ಅಚ್ಚುಕಟ್ಟಾದ ಭಾಷೆ, ಇಂದು ಕೇವಲ 200 ವರ್ಷಗಳ ಬ್ರಿಟೀಶರ ಆಳ್ವಿಕೆಯ ಪ್ರಭಾವ ಮಾತ್ರದಿಂದಲೇ, 25 ವರ್ಷಗಳ ಸ್ವತಂತ್ರಾ ನಂತರವೂ ಕೂಡ. ಭಾರತೀಯರಿಂದಲೇ "ಮೃತಭಾಷೆ" ಎನಿಸಿಕೊಳ್ಳುತ್ತಿರುವುದನ್ನು ಕೇಳಿದ ತಕ್ಷಣ, ಎಂತಹ ಸಂಸ್ಕೃತಜ್ಞನಿಗಾಗಲೀ ಅಥವಾ ಸಂಸ್ಕೃತದ ಹಿರಿಮೆಯನ್ನು ತಿಳಿದವನಿಗಾಗಲೀ ಖೇದವಾಗದೇ ಇರಲು ಸಾಧ್ಯವೇ? ಬಹು ವೈಭವದಿಂದ ಮೆರೆದ ಭಾಷೆ, ಬ್ರಿಟೀಶರ ಪ್ರಾಬಲ್ಯದಿಂದಾಗಲೀ, ಆಧುನೀಕತೆಯಿಂದಾಗಲೀ ಮೃತಭಾಷೆಯಾಗಬಲ್ಲುದೇ? ಸ್ವಚ್ಛವಾದ ಉಡುಪು ತೊಟ್ಟ ಮಾತ್ರ ಒಬ್ಬ ಮನುಷ್ಯ ನಾಗರೀಕನಾಗಬಲ್ಲನೇ? ಜ್ಞಾನಿಯಾಗಬಲ್ಲನೇ? ನಡೆ, ನುಡಿ, ಆಚಾರವಾವುದೂ ಬೇಡವೇ? ಅಥವಾ ಸಂಸ್ಕೃತವಲ್ಲಿ ಇಲ್ಲದ, ಹಿಂದೆ ರೂಢಿಯಲ್ಲಿಲ್ಲದ ವಿಜ್ಞಾನವೇನಾದರು ಇಂದಿದೆಯೋ? ಇಂದು ಆಧುನಿಕಯುಗದಲ್ಲಿ ಏನೇನು ನಾವು ಕಾಣುತ್ತಿದ್ದೇವೆಯೋ ಅವೆಲ್ಲವನ್ನು ಹಿಂದಿನ ಸಂಸ್ಕೃತಜ್ಞರು ಅರಿತಿದ್ದರೆಂಬುದಕ್ಕೆ ಅವರ ಕಾವ್ಯಗಳೇ ಸಾಕ್ಷಿಗಳಾಗಿವೆ. ಆರ್ಯಭಟ ಪ್ರಖ್ಯಾತ ಸಂಸ್ಕೃತಕವಿ. ಆತನನ್ನು "ಬೀಜಗಣಿತದ ಪಿತಾಮಹ" ನೆಂದು ರೆಯುತ್ತಾರೆ. ಕಾಲಬದಲಾಯಿತೆಂದ ಮಾತ್ರಕ್ಕೆ ಹೆತ್ತ ತಾಯಿಯನ್ನು ಕಡೆಗಾಣಿಸುವುದೇ.

ಸಂಸ್ಕೃತವು ಎಲ್ಲ ಭಾಷೆಗಳಿಗೂ ಮಾತೃಸ್ಥಾನದಲ್ಲಿದೆ. ಭಾರತೀಯ ಭಾಷೆಗಳೆಲ್ಲವೂ ಸಂಸ್ಕೃತಮಯವಾಗಿವೆ ಎಂಬುದಕ್ಕೆ ನಾವು ದಿನನಿತ್ಯವೂ ಬಳಸುವ ಪದಗಳೇ ಸಾಕ್ಷಿ. ಇಷ್ಟೇ ಅಲ್ಲದೆ ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳಲ್ಲಿಯೂ, ಅಶುಭಕಾರ್ಯಗಳಲ್ಲಿಯೂ ಮಂತ್ರರೂಪದಲ್ಲಿ ಸಂಸ್ಕೃತವನ್ನು ಪ್ರಯೋಗಿಸುತ್ತಲೇ ಇದ್ದೇವೆ. ಪ್ರಚಲಿತ ರಾಷ್ಟ್ರಭಾಷೆಯನ್ನು ಈ ಲಿಪಿಯಲ್ಲಿಯೇ ಉಪಯೋಗಿಸುತ್ತಿದ್ದೇವೆ. ಭಾರತದ ಮೂಲಮಂತ್ರವನ್ನಾಗಿ ಮುಂಡಕೋಪನಿಷತ್ತಿನ "ಸತ್ಯಮೇವ ಜಯತೇ" ಎಂಬ ಸಂಸ್ಕೃತದ ನಾಣ್ಣುಡಿಯನ್ನು ಸ್ವೀಕರಿಸಿದ್ದೇವೆ. ಇಂತಿದ್ದೂ ಸಂಸ್ಕೃತ ಮೃತಭಾಷೆ, ಉಪಯೋಗವಿಲ್ಲದ ಭಾಷೆ ಎಂದು ಹೇಳುವುದನ್ನು ನೋಡಿದರೆ, ತೃಪ್ತಿಯಾಗಿ ಉಂಡೂ ಸಹ, ಊಟವೇ ಮಾಡಿಲ್ಲವೆಂಬಂತಾಗುವುದಿಲ್ಲವೇ?

ಇಂದು ಶಾಕುಂತಲವಾಗಲಿ, ರಾಮಾಯಣವಾಗಲೀ, ರಘುವಂಶವಾಗಲಿ, ಮಹಾಭಾರತವಾಗಲಿ ವಿಶ್ವವಿಖ್ಯಾತವಾಗಿರುವುದಕ್ಕೆ ಯಾವುದು ಕಾರಣ? ಭಾಷಾಂತರಿಸಲ್ಪಟ್ಟ ಪ್ರತಿಗಳೇ? ಅಲ್ಲ. ಅಂದಿನ ಕವಿಗಳು ತಮ್ಮ ಭಾವನೆಗಳನ್ನು ಸುಂದರವಾಗಿ ಪ್ರತಿಬಿಂಬಿಸಲು ಅನುಕೂಲವಾಗಿದ್ದ, ಸಾಗರದಂತಿದ್ದ ಸಂಸ್ಕೃತ ಭಾಷೆ.

ಸಂಸ್ಕೃತಿಯ ಪ್ರತಿರೂಪ ಸಂಸ್ಕೃತಭಾಷೆ. ಸಂಸ್ಕೃತ ಮರಣಿಸಿದರೆ ಭಾರತೀಯ ಸಂಸ್ಕೃತಿಯು ಮರಣಿಸಿದಂತೆ. ವ್ಯಾಕರಣ ಕಷ್ಟವೆಂದ ಮಾತ್ರಕ್ಕೆ ಭಾಷೆ ಸಾಯಬಲ್ಲುದೇ? ಮಾನವ ಅಲ್ಪಾಯು ಎಂದ ಮಾತ್ರಕ್ಕೆ ಊಟಮಾಡಲು ಬಿಡಲಾಗುತ್ತದೆಯೇ ಅಥವಾ ಸುಖಗಳನ್ನು ತ್ಯಜಿಸಲಾಗುತ್ತದೆಯೇ? ಯಾವ ಭಾಷೆಯಾದರೂ ಪ್ರಥಮಾರ್ಧದಲ್ಲಿ ಕಷ್ಟವೆನಿಸಲಾರದೇ ಇರಲಾರದು. ಈಜುವಾತ ನೀರಿಗೆ ಅಂಜಿದರೆ ಸಾಧ್ಯವೇ? ಕಷ್ಟಕ್ಕೆ ಪ್ರತಿಫಲ ವಿದ್ದೇ ಇರುತ್ತದೆ. ಸಂಸ್ಕೃತಾಭ್ಯಾಸದಿಂದ, ಭಾರತೀಯ ಭಾಷೆಗಳ ಬೆಳವಣಿಗೆಯಾಗುವುದಷ್ಟೆ ಅಲ್ಲದೆ, ನಮ್ಮ ಪುರಾತನ ಗ್ರಂಥಗಳಲ್ಲಡಗಿರುವ ಸೌಂದರ್ಯವನ್ನು, ವಿವರಣೆಯನ್ನು, ಲಾಲಿತ್ಯವನ್ನೂ, ಭವ್ಯತೆಯನ್ನೂ ಕಾಣಲು ನೆರವಾಗುವುದು. ಊಟಮಾಡಿದುದೆಲ್ಲಾ ಉಪಯೋಗಲೇ ಬೇಕೆಂದರೇ ಹೇಗೆ? ರುಚಿಗಾಗಿ ಸಿಹಿ ತಿನ್ನುವೆವು, ಮೋಜಿಗಾಗಿ ಕುಡಿಯುವೆವು, ಸಿನಿಮಾ ನೋಡುವೆವು. ಕೆಲವರು ಧೂಮಪಾನ ಮಾಡುವರೂ ಕೂಡ. ಅಂದ ಮಾತ್ರಕ್ಕೆ ಎಲ್ಲವೂ ಮಾನವನಿಗೆ ಉಪಕಾರಿಯೆಂತಲೇ? ಅಂತೆಯೇ ಸಂಸ್ಕೃತದ ಜ್ಞಾನವೂ ಕೂಡ.

ಸಂಸ್ಕೃತಭಾಷೆಯ ಅಧ್ಯಯನ ಯಾರೊಬ್ಬರ ಸ್ವತ್ತು ಅಲ್ಲ. ಎಲ್ಲರಿಗೂ ಈ ಭಾಷೆಯ ಅಧ್ಯಯನಕ್ಕೆ ಅವಕಾಶವುಂಟು. ಹಲವರು ಮುಸಲ್ಮಾನರು ಈ ಭಾಷೆಯಲ್ಲಿ ಪಂಡಿತರಾಗಿದ್ದರೆಂಬುದನ್ನು ಸವಿಸ್ತಾರವಾಗಿ ಪ್ರಮಾಣದೊಂದಿಗೇ, ಮುಂಬಯಿ ಪ್ರಾಂತದ ಶ್ರೀ ಗುಲಾಮ ದಸ್ತಗೀರ ಅ. ಬಿರಾಜದಾರ್ ಎಂಬುವರು, ಸುಧರ್ಮಾ ಪತ್ರಿಕೆಯಲ್ಲಿ "ಮುಸ್ಲೀಮಾನಾಂ ಸಂಸ್ಕೃತಾಭ್ಯಾಸಃ" ಎಂಬ ಶೀರ್ಷಿಕೆಯುಳ್ಳ ಲೇಖನಮಾಲೆಯಲ್ಲಿ ವರ್ಣಿಸಿದ್ದಾರೆ. ಅವರೂ ಕೂಡ ಸ್ವತಃ ಸಂಸ್ಕೃತ ಪಂಡಿತರೂ ಕೂಡ. ಆದ್ದರಿಂದ ಈ ಭಾಷೆಯ ಕಲಿಯುವಿಕೆಗೆ ಯಾವ ಕಟ್ಟುಪಾಡು ಇಲ್ಲ. ಸ್ವತಂತ್ರ ಭಾರತದ ಪ್ರತಿಯೊರ್ವ ಪ್ರಜೆಯೂ, ಭಾರತದ ಸಂಸ್ಕೃತಿಯಲ್ಲಿ ಆಸಕ್ತಿಯುಳ್ಳವರೂ ಅರಿಯಲೇ ಬೇಕಾದ ಭಾಷೆ, ಸಂಸ್ಕೃತ.

ಸಂಗೀತ ಕ್ಷೇತ್ರದಲ್ಲೂ, ಸ್ತೋತ್ರಸಾಹಿತ್ಯಕ್ಕೂ ಸಂಸ್ಕೃತದ ಕೊಡುಗೆ ಅಪಾರ. ಸಂಗೀತದಲ್ಲಿ ಖ್ಯಾತಿವೆತ್ತ ಮುತ್ತಯ್ಯ ದೀಕ್ಷಿತರು, ತ್ಯಾಗರಾಜರು ಮೊದಲಾದವರು ಸಂಸ್ಕೃತದಲ್ಲಿ ಪಾಂಡಿತ್ಯ ಪಡೆದಿದ್ದವರೇ- ಇದಕ್ಕೆ ಅವರು ರಚಿಸಿರುವ ಸಂಸ್ಕೃತದ ರಚನೆಗಳೇ ಸಾಕ್ಷಿ. ಇಂದಿನ ಸಂಗೀತೋಪಾಸಕರೂ ಸಂಸ್ಕೃತವನ್ನು ಕಲಿತು. ರಾಗದೊಂದಿಗೆ, ಹಾಡಿನಲ್ಲಿರುವ ಭಾವವನ್ನೂ ಅರಿತು, ಬೆರೆಸಿದರೆ ಆನಂದಿಸುವುದಕ್ಕೆ ಅದೆಷ್ಟು ಚೆನ್ನ.

ನಮಗೆ ಸ್ವಾತಂತ್ರ್ಯದೊರೆತು 25 ವರ್ಷಗಳಾದ ನಂತರವಾದರೂ ಈ ಭವ್ಯ ಭಾಷೆಯಲ್ಲಿ ಒಂದು ದಿನ ವಾರ್ತಾಪತ್ರಿಕೆ "ಸುಧರ್ಮಾ", ಅದೂ ಕರ್ನಾಟಕದ ಮೈಸೂರಿನಿಂದ ಹೊರಟಿದೆ ಎಂದರೆ ನಿಜಕ್ಕೂ, ಕನ್ನಡಿಗರಾದ ನಮಗೆಲ್ಲಾ ಹೆಮ್ಮೆ. ಅಂತೂ ಕೊನೆಗೂ ಈ ಪುರಾತನವಾದ, ಭವ್ಯವಾದ, ಅಂದವಾದ ಭಾಷೆಯ ಪುನರುದ್ಧಾರಕ್ಕೆ ಕರ್ನಾಟಕವೇ ಮುಂದೆ ಬರಬೇಕಾಯಿತಲ್ಲಾ! ಪುಟ್ಟ ಪತ್ರಿಕೆಯಾದರೂ ದಟ್ಟವಾಗಿ ಭಾರತದಲ್ಲೆಲ್ಲಾ ವ್ಯಾಪಿಸಿದೆ- ಈ ಪತ್ರಿಕೆಯಲ್ಲಿನ ಸುದ್ದಿಗಳನ್ನು ಓದುತ್ತಿದ್ದರೆ, ಈ ಭಾಷೆಯ ವಿಶಾಲತೆ ಎಷ್ಟೆಂಬುದು ಅರಿವಾಗುತ್ತದೆ- ಆಧುನಿಕ ಸಮಾಚಾರಗಳನ್ನೆಲ್ಲಾ, ವಿಜ್ಞಾನ, ವೈದ್ಯಕ್ಕೆ ಸಂಬಂಧಪಟ್ಟ ವಾರ್ತೆಗಳನ್ನೆಲ್ಲಾ ಒದಗಿಸಬೇಕಾದರೆ ಈ ಭಾಷೆಯಲ್ಲಿ ಆ ಪದಗಳಿಗೆ ಸಮಾನಾರ್ಥವುಳ್ಳ ಪದಗಳು ಮುಂಚೆಯೇ ಇರಬೇಕೆನ್ನುವುದು ಅರಿವಾಗುವುದು. ಈ ಭಾಷೆಯ ಸಂಪತ್ತೆಷ್ಟು ಎಂಬುದೂ ಕೂಡ ಇದರಿಂದ ಅರಿಯಲಾಗುವುದು. ಈ ಪತ್ರಿಕೆ ಪತ್ರಿಕಾವೃತ್ತಿಯಲ್ಲಿ ಹೊಸದಿಲ್ಲದಿರ ಬಹುದು. ಆದರೆ ಸಂಸ್ಕೃತದ ಪ್ರಚಾರದಲ್ಲಿ ಒಂದು ದಿಟ್ಟ ಹೆಜ್ಜೆ. ಈ ಪತ್ರಿಕೆ ತನ್ನ 5 ನೇ ಹುಟ್ಟು ಹಬ್ಬವನ್ನು ಇದೇ ಜುಲೈ 15 ರಂದು ಆಚರಿಸಿಕೊಳ್ಳಲಿದೆ. ಈ ವಿಶ್ವದ ಏಕೈಕ ಸಂಸ್ಕೃತ ದಿನ ಪತ್ರಿಕೆಯ ಹುಟ್ಟು ಹಬ್ಬವು, ಸಂಸ್ಕೃತದ ವೈಭವದ ಪುನರುಜ್ಜೀವನಕ್ಕೆ ನಾಂದಿಯಾಗಲಿ ಎಂದು ಆಶಿಸೋಣ-

ಅಂತೆಯೇ ಮತ್ತೊಂದು ದಿಟ್ಟಹೆಜ್ಜೆ, ಭಾರತ ಸರ್ಕಾರದ ಸಂಸ್ಕೃತ ವಾರ್ತಾಪ್ರಸಾರ- ಎಲ್ಲ ಆಕಾಶವಾಣಿಯ ನಿಲಯಗಳಿಂದಲೂ ಪ್ರಾತಃಕಾಲ ಪ್ರಸಾರವಾಗುತ್ತಿರುವ ಈ ವಾರ್ತಾಪ್ರಸಾರ ಶ್ಲಾಘನೀಯವಾದ ಕಾರ್ಯ. ಪ್ರಾಯಶಃ ಪಾಶ್ಚಿಮಾತ್ಯರ ಸಂಸ್ಕೃತದ ಬಲವು, ನಮ್ಮ ಸರ್ಕಾರದ ನಾಯಕರ ಕಣ್ಣು ತೆರೆಯಿಸಿತೇನೋ? ಅಂತೂ ಒಂದು ವರ್ಷದ (30—6—75 ರಂದು) ಪ್ರಸಾರವನ್ನು ಪೂರೈಸಿಕೊಳ್ಳಲಿರುವ ಈ ಸಂಸ್ಕೃತ ವಾರ್ತಾಪ್ರಸಾರದೊಂದಿಗೆ ಎರಡನೆಯ ರಾತ್ರಿಯ ಪ್ರಸಾರವು ಪ್ರಾರಂಭವಾಗುವುದೆಂದು ಪತ್ರಿಕೆಗಳಲ್ಲಿ ಓದಿದೆವು. ಅದು ಸತ್ಯವಾಗಿದ್ದಲ್ಲಿ ಸಂಸ್ಕೃತ ನಿಜವಾಗಲೂ ಭವ್ಯತೆಯನ್ನು ಮರಳಿ ಪಡೆಯುತ್ತಿದೆಯೇನೋ ಎಂದು ಭಾವಿಸಲಾಗುತ್ತದೆ.

ಸಂಸ್ಕೃತಭಾಷೆ ಹೆಚ್ಚು ಹೆಚ್ಚು ಜನ ಕಲಿಯುವಂತಾಗಲಿ. ಈ ಮುಖ್ಯವಾದ ಕಾಲದಲ್ಲಿ ಕರ್ನಾಟಕ ಸರ್ಕಾರ ಪ್ರಥಮಾ ಮತ್ತು ಕಾವ್ಯ ತರಗತಿಗಳನ್ನು ಪಾಠಶಾಲೆಯಿಂದ ತೆಗೆದಿರುವುದು ಶೋಚನೀಯ. ಪ್ರಥಮ ಪಾಠಗಳೂ. ಮಗುವಿನ ಬೆಳವಣಿಗೆಗೆ ತಾಯಿ ಹಾಲು ಎಷ್ಟು ಮುಖ್ಯವೋ ಅಷ್ಟೇಮುಖ್ಯ. ಆದ್ದರಿಂದ ಈ ಆದೇಶವನ್ನು ಹಿಂತೆಗೆದುಕೊಳ್ಳುವುದರ ಮೂಲಕ ಸಂಸ್ಕೃತದ ಪ್ರೋತ್ಸಾಹಕ್ಕೆ ಧಕ್ಕೆ ತರದಿರಲಿ ಎಂದು ಪ್ರಾರ್ಥಿಸುತ್ತೇನೆ.



"ಜೀಯಾದ್ಗೀರ್ವಾಣಭಾರತೀ"

# ಯದುಶೈಲ ಯಾದವಾದ್ರಿಯೆಂಬ ಮೇಲುಕೋಟೆ

ಶ್ರೀ ಯನ್. ನಾಗರಾಜಯ್ಯ, ಮೇಲುಕೋಟೆ.
Vaidigar. SK.

ದಕ್ಷಿಣಬದರಿ. ನಾರಾಯಣಗಿರಿ, ಯಾದವಗಿರಿ ಯದುಶೈಲಾ ಎಂದು ನಾಲ್ಕುಯುಗಗಳಿಂದಲೂ ಖ್ಯಾತವಾದ ಮೇಲುಕೋಟೆಯು ರಮ್ಯತೆಯಿಂದ ಕೂಡಿ ಸಮುದ್ರಮಟ್ಟಕ್ಕಿಂತ ಮೂರು ಸಾವಿರ ಅಡಿಗಳ ಎತ್ತರದಲ್ಲಿ ಮೈಸೂರು-ತುಮಕೂರು. ರಸ್ತೆಯ ಜಕ್ಕನಹಳ್ಳಿಯಿಂದ ಉತ್ತರಕ್ಕೆ ಮೂರು ಮೈಲಿ ದೂರದಲ್ಲಿ ವಿರಾಜಿಸುತ್ತಿದೆ. ಇಲ್ಲಿಯ ಆರಾಧ್ಯದೇವರು ಶ್ರೀ ಚೆಲುವ ತಿರುನಾರಾಯಣಸ್ವಾಮಿ.

ಮೂಲ, ದ್ವಯ ಮತ್ತು ಚರಮಶ್ಲೋಕದ ಪ್ರತಿಪಾದಕ್ಕಾಗಿ ಬಿಜಯಮಾಡಿ ಭಕ್ತರಭೀಷ್ಟವನ್ನು ನೆರವೇರಿಸುತ್ತಿರುವ ತಿರುನಾರಾಯಣಮೂರ್ತಿಯು ಬ್ರಹ್ಮನಿಗೆ ಭಗವಂತನಿಂದ ಅನುಗ್ರಹವಾಗಿ ಆವನಿಂದ ಸನತ್ಕುಮಾರರಿಗೆ ಅನುಗ್ರಹವಾಗಿ ಈ ನಾರಾಯಣಗಿರಿಯಲ್ಲಿ ಪ್ರತಿಷ್ಠಿತವಾದ ಆನಂದಮಯ ವಿಮಾನದಿಂದ ಕೂಡಿ ಇಲ್ಲಿ ನೆಲೆಸಿರುತ್ತಾನೆ. ಉತ್ಸವಮೂರ್ತಿ ಚೆಲುವ ರಾಯಸ್ವಾಮಿಯೂ ಇದೇಕ್ರಮದಲ್ಲಿ ಬ್ರಹ್ಮನಿಗೂ, ಬ್ರಹ್ಮನಿಂದ ಶ್ರೀರಾಮನಿಗೂ, ರಾಮನ ವಂಶದಿಂದ ಯದುವಂಶಕ್ಕೆ ಕನಕಮಾಲಿ ಎಂಬ ಕುಶಮಹಾರಾಜನ ಮಗಳ ವಿವಾಹವಾದ ನಂತರೆ ಬಂದು ಯದುವಂಶದಲ್ಲಿ ಅವತರಿಸಿದ ಶ್ರೀಕೃಷ್ಣ ಪರಮಾತ್ಮನಿಂದ ಪೂಜಿತವಾಗಿ, ಬಲರಾಮನು ತೀರ್ಥಯಾತ್ರೆ ಮಾಡುತ್ತಾ ಇಲ್ಲಿಗೆ ದಯಮಾಡಿಸಿ ಇಲ್ಲಿ ನಾರಾಯಣಮೂರ್ತಿಗೂ, ತಮ್ಮಲ್ಲಿರುವ ಶ್ರೀ ಚೆಲುವರಾಯಮೂರ್ತಿ ಸಾಮ್ಯತೆ ಕಂಡು ದ್ವಾರಕೆಗೆ ತೆರಳಿ ಕೃಷ್ಣನ ಸಹಿತ ಇಲ್ಲಿಗೆ ಬಂದು ಉತ್ಸವಮೂರ್ತಿಯಾಗಿ ಶ್ರೀ ಚೆಲುವರಾಯನನ್ನು ಸಮರ್ಪಣೆಮಾಡಿ ಬಹಳಕಾಲ ಪೂಜಿಸುತ್ತಿದ್ದನೆಂದು ಇಲ್ಲಿಯ ಸ್ಥಳ ಪುರಾಣದ ಮುಖ್ಯಸಾರವಾಗಿದೆ. ನಾಲ್ಕುಯುಗಗಳಿಂದಲೂ ವೈಭವದಿಂದ ಮೆರೆಯುತ್ತಿದ್ದ ಈ ದೇವಾಲಯ ಕಲಿಯುಗ ಅನೇಕ ವರಗಳು ಕಳೆದಬಳಿಕ ದುಷ್ಕೃತ್ಯಕಾರರ ದಾಳಿಗೆ ಸಿಲುಕಿ ಸಂಪೂರ್ಣನಾಶವಾಗಿ ಉತ್ಸವಮೂರ್ತಿ ಅಪಹೃತವಾಯಿತು. ಕ್ರಮೇಣ ನಾರಾಯಣಮೂರ್ತಿಯನ್ನು ವಲ್ಮೀಕ ಆವರಿಸಿಬಿಟ್ಟಿತು. (ಹುತ್ತ) ಊರುಕೂಡ ಕಾಡಾಯಿತು. ನಂತರ ಯತಿಕುಲಶ್ರೇಷ್ಠರೂ ವಿಶಿಷ್ಟಾದ್ವೈತಸಿದ್ಧಾಂತ ಪ್ರತಿಪಾದಕರೂ ಆದ ರಾಮಾನುಜಾಚಾರ್ಯರು ಈ ಕ್ಷೇತ್ರವನ್ನು ಜೀರ್ಣೋದ್ಧಾರಮಾಡಿ ಬೆಳಕಿಗೆತಂದರು. ಅಂದಿನಿಂದ ಮೇಲುಕೋಟೆಯು ಬೆಳಕಿಗೆ ಬಂದಿತು.

ಆಚಾರ್ಯಯತಿರಾಜರು ತಮಿಳುನಾಡಿನಿಂದ ಚೋಳರಾಜರಬಾಧೆಯನ್ನು ಸಹಿಸಲಾರದೆ. ಕರ್ನಾಟಕಕ್ಕೆ ದಯ ಮಾಡಿದರು, ಆಗ ತೊಂಡನೂರು ಎಂಬಲ್ಲಿ ಬಿಟ್ಟಿದೇವನೆಂಬ ಜೈನದೊರೆ ರಾಜ್ಯವಾಳುತ್ತಿದ್ದನು. ಅವನ ಮಗಳಿಗೆ ಬ್ರಹ್ಮ ಪಿಶಾಚವೊಂದು ಹಿಡಿದು ತೊಂದರೆಕೊಡುತ್ತಿತ್ತು. ಆಚಾರ್ಯರನ್ನುಆಶ್ರಯಿಸಿ ಅವರ ಅನುಗ್ರಹದಿಂದ ಇದು ಪರಿಹಾರವಾಯಿತು. ಇದರಿಂದ ಆಕರ್ಷಿತನಾಗಿ ವೈಷ್ಣವ ಮತವನ್ನು ಪಡೆದು ವಿಷ್ಣುವರ್ಧನನೆಂಬ ನಾಮಾಂಕಿತದಿಂದ-ಆಚಾರ್ಯರ ಶಿಷ್ಯನಾದನು.

(ಈತ ಈಗಿನ ಹಳೆಬೀಡು ಅದು ದ್ವಾರಸಮುದ್ರದ ರಾಜನಾದ ಬಿಲ್ಲಿದೇವನೇ ಇರಬೇಕು)

ರಾಮಾನುಜಾಚಾರ್ಯರು ಅಲ್ಲಿರುವಕಾಲದಲ್ಲಿ ಮೇಲುಕೋಟೆಯ ತಿರುನಾರಾಯಣಮೂರ್ತಿಯು ಕನಸಿನಲ್ಲಿ ಗೋಚರಿಸಿ ತಾನು ಉತ್ತದಲ್ಲಿರುವುದಾಗಿಯೂ, ತನಗೆ ಪೂಜಾದಿಗಳು ನಡೆಯುವಂತೆ ಮಾಡಬೇಕೆಂದು ತಿಳಿಸಿದರು. ಮಾರನೇದಿನವೇ ಮಕರ ಶುಕ್ಲ ಪುನರ್ವಸು ಅಂದೇ ಇಲ್ಲಿಗೆ ಬಂದು ನಾರಾಯಣಮೂರ್ತಿ ಹುತ್ತದಿಂದ ಬೇರ್ಪಡಿಸಿ ಮೊದಲ ಪೂಜೆಯನ್ನು ಮಾಡಿದರು,

ನಂತರ ಊರು, ಕೊಳ, ದೇವಾಲಯದ ಪ್ರಾರಂಭ ಮಾಡಿದರು. ವಿಷ್ಣುವರ್ಧನ ಸಹಾಯದಿಂದ ಈ ಕಾಡು ಪ್ರದೇಶದಲ್ಲಿ ಆಗ ಇಲ್ಲಿದ್ದ ಹರಿಜನರು ಅವರಿಗೆ ತುಂಬಾ ನೆರವಾದರು. ಅವರು ಮೇಲುಕೋಟೆಯನ್ನು ಜೀರ್ಣೋದ್ಧಾರಮಾಡಿದ ದಿನ ಉತ್ಸವವನ್ನು ಇಂದಿಗೂ ಆಚರಿಸುತ್ತಾರೆ. ಅದಕ್ಕೆ ತೊಣ್ಣೂರ್ (ಪುನರ್ವಸು) ಉತ್ಸವವೆಂದೆ ಹೆಸರು, ಇಂದಿಗೆ ಸುಮಾರು 85 ರ ವರ್ಷಗಳಿಗೂ ಜಾಸ್ತಿಯಾಗಿದೆ. ಇದಾದ ಬಳಿಕ ನಿತ್ಯ, ಮಾಸ, ವಿಶೇಷ, ಬ್ರಹ್ಮೋತ್ಸವ ನಡೆಸಲು ವ್ಯವಸ್ಥೆಮಾಡಿ ಶ್ರೀರಂಗದ ಕಡೆಯಿಂದ ಶ್ರೀರಂಗರಾಜ ಭಟ್ಟರ್ ಮತ್ತು 'ಎಂಬತ್ತಿರುವರ್' ಎಂಬ ಐವತ್ತೆರಡು ಮಂದಿಯನ್ನು ಕರೆದುಕೊಂಡು ಬಂದು ನೆಲೆಗೊಳಿಸಿದರು. ಅವರ ಆದೇಶ ದಂತೆಯೇ ಇಂದಿಗೂ ದೇವಾಲಯದಲ್ಲಿ ಪೂಜಾದಿಗಳು ನಡೆಯುತ್ತಿವೆ ಅವರಿಗೆ ಬ್ರಹ್ಮೋತ್ಸವ ನಡೆಸಲು ಉತ್ಸವಮೂರ್ತಿಯಿಲ್ಲದ್ದು ಚಿಂತೆಯಾಯಿತು. ಪುನಃ ಉತ್ಸವ ಮೂರ್ತಿದಿಲ್ಲಿಯಲ್ಲಿರುವುದು ವಿಷಯಜ್ಞಾನ ದೃಷ್ಟಿಯಿಂದ ತಿಳಿದು ಬಂದು ತಮ್ಮ ಪರಿವಾರಸಮೇತ ದಿಲ್ಲಿಗೆ ಪ್ರಯಾಣಬೆಳೆಸಿದರು. ದಿಲ್ಲಿಯದೊರೆ ಬಾದುಷ ಯತಿವರರಾದ ಆಚಾರ್ಯ ರಾಮಾನುಜರನ್ನು ಆದರದಿಂದ ಬರಮಾಡಿಕೊಂಡು ಬಂದ ವಿಷಯ ಅರಿತು ತನ್ನ ಬಂಡಾರದಲ್ಲಿ ಎಲ್ಲಾ ಮೂರ್ತಿ (ದೇವರು)ಗಳನ್ನು ತೋರಿಸಿ ಬೇಕಾದುವನ್ನು ತೆಗೆದುಕೊಳ್ಳಿರೆಂದು ಹೇಳಲು ಅಲ್ಲಿ ಅವರಿಗೆ ಬೇಕಾದ ಉತ್ಸವ ವಿಗ್ರಹ ಚೆಲುವರಾಯ (ರಾಮಪ್ರಿಯ) ನಿರಲಿಲ್ಲ. ಆಗ ಬಾದುಷಹನು ನಿಮ್ಮ ದೇವರು ಇಲ್ಲಿದ್ದರೆ ಕೂಗಿ ಕರೆಯಿರಿ ಬರುವುದೇನೋಡೋಣವೆಂದನು. ಕೂಡಲೇ ರಾಮಾನುಜರು ಮನಸಿನಲ್ಲಿಧ್ಯಾನಿಸಿ, "ವಾರೀರೇರ್ವ ಶೆಲ್ವಪಿಳ್ಳೈ" "ಚೆಲುವರಾಯ, ಬಾ" ಎಂದು ಕರೆದರು. ರಾಜನ ಮಗಳ ಅಂತಃಪುರದಲ್ಲಿದ್ದ ಚೆಲುವರಾಯ ಸ್ವಾಮಿಯ ಮೂರ್ತಿ ಓಡಿ ಬಂದು ರಾಮಾನುಜರ ತೊಡೆಯಮೇಲೆ ಕುಳಿತುಬಿಟ್ಟಿತು. ಇದನ್ನು ನೋಡಿ ರಾಜನಿಗೆ ಪರಮಾಶ್ಚರ್ಯವಾಗಿಬಿಟ್ಟಿತು. ವಿಗ್ರಹದ ಜೊತೆ ಅನೇಕ ಬಳುವಳಿಯನ್ನು ಕೊಟ್ಟು ಆಚಾರ್ಯರನ್ನು ಬಿಳ್ಕೊಟ್ಟನು. ಇತ್ತ ದೊರೆಯ ಮಗಳು ವರನಂದಿ (ಬೀಬೀನಾಚ್ಚಿಯಾರ್) ಯು ವಿಗ್ರಹವನ್ನು ಕಾಣದೆ ತಂದೆಯಲ್ಲಿ ಬಂದು ನನ್ನ ಪತಿಯಾದ ಚೆಲುವರಾಯವಿಗ್ರಹವನ್ನು ಮರಳಿಕೊಡಿಸುವಂತೆ ಕೇಳಿದಳು. ಇವಳು ಆ ವಿಗ್ರಹವನ್ನು ಆಟಕ್ಕೆಂದು ಇಟ್ಟುಕೊಂಡು ಅವರ ಅಂದಕ್ಕೆ ಮರುಳಾಗಿ ಅದನ್ನೆ ತನ್ನ ಪತಿಯಾಗಿ ಪಡೆದಿದ್ದಳು. ವಿಗ್ರಹ ಕೂಡ ಅವಳಿಗೆ ಮನುಷ್ಯರೂಪದಲ್ಲಿ ಸಕಲ ಸಂತೋಷವನ್ನುಂಟು ಮಾಡುತ್ತಿತ್ತೆಂದು ಪ್ರತೀತಿ. ಆದರೂ ಮನಸ್ಸು ತಡೆಯದೆ ನೇರವಾಗಿ ಇಲ್ಲಿಗೆ ಬಂದು ಶ್ರೀ ಚೆಲುವರಾಯನ ಪಾದದಲ್ಲಿ ಐಕ್ಯವಾದಳೆಂದೂ ಇಲ್ಲಿಯದಂತೆ ಕಥೆ. ಈಗಲೂ ಕೂಡ ಸ್ವಾಮಿಪಾದದಲ್ಲಿ ಶ್ರೀವರನಂದಿ (ಬೀಬಿ) ಯ ವಿಗ್ರಹವನ್ನು ಕಾಣಬಹುದು. (ದಿಲ್ಲಿಯೆಂದರೆ ಈಗಿನ ದೆಹಲಿಯಾಗಿರದೇ ಯಾವುದೋ ದೂರದ ಊರಾಗಿರಬಹುದು. ಅಮ್ಮಳು ರಾಯನೆಂಬ ಮ್ಲೇಚ್ಛದೊರೆ ರಾಜ್ಯಭಾರ ಮಾಡುತ್ತಿದ್ದ ಈ ತನ ಮಗಳೇ ವರನಂಜಿ ಅಥವಾ ವರನಂದಿ ಎಂಬ ವಿಷಯವು ಇಲ್ಲಿ ರಾಮಾನುಜರ ನಾರಾಟನ ಕೆಲವು ಸಾಲುಗಳಲ್ಲಿ ಉಲ್ಲೇಖವಿದೆ. ಏನೇ ಆದರೂ. ಈ ಕಥೆಗೆಯಾವುದೇ ಆಧಾರ ದೊರೆಯದೆ ಇದ್ದರೂ ಇದು ಆಚಾರ್ಯಕಾಲದಲ್ಲಿ ನಡೆದಿದ್ದರಿಂದ ನಿಜ ಇರಬಹುದು.)

ಉತ್ಸವಮೂರ್ತಿಯನ್ನು ಮೇಲುಕೋಟೆಗೆ ತಂದ ನಂತರ ಬ್ರಹ್ಮೋತ್ಸವ ನಡೆಸಿದರು. ಮೊದಲದಿನ ಅಂಕುರಾರ್ಪಣೆ, ಕಲ್ಯಾಣೋತ್ಸವ, ಧ್ವಜಾರೋಹಣ ನಾಗಪಲ್ಲಿ "ವೈರಮುಡಿ" ತೇರು, ತೆಪ್ಪ ತೀರ್ಥವಾರಿ ಮೊದಲಾದವಗು ಹತ್ತು ದಿನಗಳು ನಡೆಯುತ್ತದೆ. ಈ ಬ್ರಹ್ಮೋತ್ಸವದಲ್ಲೇ ನಾಲ್ಕನೇ ದಿನ "ವೈರಮುಡಿ" ಕಿರೀಟಧಾರಣೆ ಮಹೋತ್ಸವ ನಡೆಯುವುದು. ಇದು ಭಾರತದಲ್ಲೇ ಅಲ್ಲದೇ ನೇಪಾಳ ಕಾಶ್ಮೀರ, ಎಲ್ಲೆಡೆಯು ಪ್ರಖ್ಯಾತವಾಗಿದೆ. ಆ ಸಮಯದಲ್ಲೆ ಕ್ಷೇತ್ರಕ್ಕೆ ಸಾವಿರಾರು ಭಕ್ತಾದಿಗಳು ದೇಶದ ಎಲ್ಲೆಡೆಯಿಂದ ಆಗಮಿಸಿ ದೇವರ ದರ್ಶನ ಪಡೆಯುತ್ತಾರೆ. ಇದು ಏಪ್ರಿಲ್ 1 ರಂದು ವೈಭವದಿಂದ ಜರುಗುತ್ತದೆ. "ವೈರಮುಡಿ ಕಿರೀಟಕ್ಕೆ" ಪ್ರತ್ಯೇಕ ಇತಿಹಾಸವಿದೆ ಅದು ಈಗಿದೆ.

ಹಿಂದೊಂದು ಕಾಲದಲ್ಲಿ ಕ್ಷೀರಾಬ್ಧಿ ಶಾಯಿ ಯೂದ ಅನಿರುದ್ಧ ಭಗವಾನ್ ಯೋಗನಿದ್ರೆಯಲ್ಲಿ ಪವಡಿಸಿದ್ದ ಕಾಲದಲ್ಲಿ ಅಲ್ಲಿದ್ದ ಅಂತರಂಗಭಕ್ತರಲ್ಲಿ ಒಬ್ಬನಾದ ಪ್ರಹ್ಲಾದನ ಮಗ ವಿರೋಚನನು ತನ್ನ ಪೂರ್ವ ಫಲದ ನಿಮಿತ್ತ ಭಗವಂತನ ಕಿರೀಟವನ್ನು ಅಪಹರಿಸಿಕೊಂಡು ಹೋಗಿ ಪಾತಾಳದಲ್ಲಿ ಅಡಗಿದನು. ಇದು ಇತರರಿಗೂ ತಿಳಿದು ಗರುಡನನ್ನು ವಿರೋಚನನನ್ನುಗೆದ್ದು ಕಿರೀಟ ವನ್ನು ತರುವಂತೆ ನೇಮಿಸಿ ಕಳುಹಿಸಿದರು. ಗರುಡನು ಕಿರೀಟವನ್ನು ಪುನಃ ತರುವಾಗ ಅವನ ಕಡಿಮೆಯಾ ಯಿತು. ಕೆಳಗೆ ನೋಡಿದರೆ ಭಗವಂತ ಕೃಷ್ಣಾವತಾರ ದಲ್ಲಿ ಗೋಚರಿಸಿದರು. ಆಗ ಅದನ್ನು (ಕಿರೀಟವನ್ನು) ಕೃಷ್ಣನಿಗೆ ದರಿಸಿವರೆ ಚಿಕ್ಕದಾಗಿಬಿಟ್ಟಿತು. ಅದನ್ನು ಕಂಡು ಕೃಷ್ಣನು ತಾನು ಆರಾಧಿಸುತ್ತಿದ್ದ ಚೆಲುವರಾ ಯನಿಗೆ ಅರ್ಪಿಸಿದನು. ಅದು ಹೇಳಿ ಮಾಡಿಸಿದಂತೆ ಸರಿಯಾಯಿತು. ಶತಯೋಜನ ವಿಸ್ತೀರ್ಣವುಳ್ಳ ಈ ಅನಿರುದ್ಧ ಕಿರೀಟ ಭಗವಾನ್ ಮಹಿಮೆಯಿಂದ ಬಹಳ ಸಣ್ಣಆಕಾರವಾಗಿ ಆಚಾರ್ಯಮೂರ್ತಿಯಾದ ಚೆಲು ವರಾಯನ ತಲೆಗೆ ಮುಡಿಯಾಯಿತು. ಇದನ್ನು ಕಂಡು ಗರುಡನು ಆಶ್ಚರ್ಯಪಟ್ಟು ಚೆಲುವರಾಯ ಮೂರ್ತಿ ಯನ್ನು ಹೆಗಲಮೇಲೆ ಇಟ್ಟುಕೊಂಡು ಬಂದು ಪ್ರದ ಕ್ಷಣೆ ಮಾಡಿದಕಾರಣ ಈಗಲೂ ಗರುಡನಮೇಲೆ ವೈರ ಮುಡಿ ಉತ್ಸವ ನಡೆಯುತ್ತಾ ಬಂದಿದೆ. ವೈನತೇಯ (ಗರುಡ)ನು ಇದನ್ನು ಚೆಲುವರಾಯನಿಗೆ ಧರಿಸಿದ ಕಾರಣ ವೈರಮುಡಿಯೆಂದೇ ಹೆಸರಾಗಿ ಕ್ರಮೇಣ ಜನರ ಬಾಯಲ್ಲಿ ವೈರ ವಾಗಿ ಮಚೀಯಾಗಿದೆ. ಎನೆ ಆದರೂ ಬಹಳ ಬೆಲೆಯುಳ್ಳ ಇದರ ವಜ್ರಗಳು ನೋಡಲು ತುಂಬಾ ರಮ್ಯವಾಗಿದೆ.

ಈಗ ಇದು ಮೈಸೂರು ರಾಜವಂಶದವರ ವಶದ- ಲ್ಲಿದೆ; ಇದರ ಭದ್ರತೆಯದೃಷ್ಟಿಯಿಂದ ಮೈಸೂರು ಅರ ಸರುವಂಕ್ಕೆ ಇಟ್ಟುಕೊಂಡಿದ್ದರು. ವೈರಮುಡಿಯಂದೇ ಇಲ್ಲಿಗೆ ಸಕಲ ರಾಜಮರ್ಯಾದೆಯಿಂದಲೂ ದೇವಾಲ ಯದ ಮರ್ಯಾದೆಯಿಂದಲೂ ಮಾರ್ಗಮಧ್ಯದಲ್ಲಿ ಭಕ್ತಾದಿಗಳಿಂದ ಪೂಜೆಗೊಂಡು ವೈರಮುಡಿ ಕಿರೀಟವು ಮೇಲುಕೋಟೆಯನ್ನು ತಲಪುತ್ತದೆ. ಅದರ ಜೋತೆ ಯಲ್ಲೇ ಮೈಸೂರು ರಾಜಒಡೆಯರ್ ರವರು ಮಾಡಿಸಿ ಕೊಟ್ಟ ರಾಜ ಕಿರೀಟವುಬರುತ್ತದೆ. ರಾತ್ರಿ 9 ಗಂಟೆಗೆ ಸ್ವಾಮಿಗೆ ವೈರಮುಡಿ ಧಾರಣೆಯಿಂದ ಬೆಳಗಿನ ಜಾವ 4 ಗಂಟೆಯವರೆಗೂ ಉತ್ಸವ ನಡೆಯುತ್ತದೆ. ಆದಾದ ನಂತರ ಸ್ವಾಮಿ ರಾಜ ಮುಡಿಧಾರಣೆ ಜರು- ಗುತ್ತದೆ. ಮಾರನೇ ಬೆಳಗ್ಗೆಯೇ ವೈರಮುಡಿ ಮೈಸೂ ರುಅರಮನೆಯನ್ನು ತಲಪುತ್ತದೆ. ಎಲ್ಲಾ ಕಾಲಗಳಲ್ಲೂ ಮೈಸೂರು ಅರಸರು ಮೇಲುಕೋಟೆಗೆ ರಕ್ಷಣೆಯನ್ನು ಕೊಡುತ್ತಿದ್ದೂ ಊರಿನ ಭದ್ರತೆಗಾಗಿ ಕೋಟೆಯನ್ನೆ ಕಟ್ಟಿಸಿದ್ದರಿಂದ ಮೇಲುಕೋಟೆ ಎಂದು ಹೆಸರಾಯಿತು. ಟಿಪ್ಪೂಸುಲ್ತಾನ್ ಕೂಡ ಇಲ್ಲಿಗೆ ಅನೇಕ ಬಳುವಳಿಕೆ ಯನ್ನು ಕೊಟ್ಟಿರುತ್ತಾನೆ. ಅದನ್ನು ಈಗಲೂ ನಾವು ಇಲ್ಲಿ ಕಾಣಬಹುದು.

ಶ್ರೀ ಯೋಗ ನರಸಿಂಹಸ್ವಾಮಿಯು ಇಲ್ಲಿಯ ಶ್ರೀ ನರಸಿಂಹಗಿರಿಯಮೇಲೆ ಭಕ್ತಪ್ರಹ್ಲಾದನ ಅಭೀಷ್ಟ ದಂತೆ ನೆಲಸಿ ಭಕ್ತರ ಅಭೀಷ್ಟವನ್ನು ನಡೆಸುತ್ತಿರುವ ಬೆಟ್ಟವು ಇಲ್ಲಿದೆ; ಅದರ ಕೆಳಭಾಗದಲ್ಲಿ ವಿನಾಯಕನ ವಿಗ್ರಹ ವೊಂದು ಇದ್ದು ವಿಶೇಷ ಆಕರ್ಷಣೀಯ ವಾಗಿದೆ. ಕಲ್ಯಾಣೀಪುಷ್ಕರಣಿಯ ವರಾಹದೇವರು, ಭೂದೇವಿಯನ್ನು ಉದ್ಧರಿಸಿದ್ದಾಗ ಅವರ ಮೈಬೆವರಿ- ನಿಂದ ಉಂಟಾದ ತೀರ್ಥವಾಗಿದೆ. ಇಲ್ಲಿ ಸ್ನಾನಮಾಡಿ ದರೆ ಪ್ರಯಾಗದಲ್ಲಿ ಕಾಶಿಯಲ್ಲಿ ಸ್ನಾನಮಾಡಿದ್ದಕ್ಕಿಂತ ಕೋಟಿಪುಣ್ಯ ಹೆಚ್ಚೆಂದು ಪ್ರತೀತಿ. ಇಲ್ಲಿ ಗಂಗೆಯು ಫಾಲ್ಗುಣಮಾಸದಲ್ಲಿ ನೆಲಸುತ್ತಾಳೆಂದು ಸ್ಥಳಪುರಾಣ ದಿಂದ ತಿಳಿಯುತ್ತದೆ. ಇಲ್ಲಿಯ ದೇವಾಲಯದ ಎದುರಿಗೆ ಬದರಿವೃಕ್ಷವಿದೆ. ಅದರ ಕೆಳಭಾಗದಲ್ಲಿ ಬದರೀ ನಾರಾಯಣನು ತೊಡೆಯಮೇಲೆ ಲಕ್ಷ್ಮಿಯನ್ನು ಕುಳ್ಳಿರಿಸಿಕೊಂಡು ಮಹಾಮಂತ್ರಗಳನ್ನು ಉಪದೇಶಿ ಸುತ್ತಾ ನೆಲಸಿದ್ದಾನೆ. ಆ ಕಾರಣದಿಂದಲೇ ಇಲ್ಲಿಗೆ ದಕ್ಷಿಣ ಬದರೀಕ್ಷೇತ್ರವೆಂದು ಹೆಸರು, ಉತ್ತರ ಬದರಿಗೆ ಹೋಗದವರು ಇಲ್ಲಿ ದರ್ಶನಮಾಡಿದರೆ ಆ ಫಲ ಉಂಟೆಂದು ಪ್ರತೀತಿ. ಇಲ್ಲಿ ಇನ್ನೂ ಅನೇಕ ಪ್ರೇಕ್ಷ ಣೀಯಗಳಿವೆ ಸ್ಥಳ. ತೊಟ್ಟಿಲುಮಡು ಅಕ್ಕತಂಗಿ ಯರ ಕೊಳ, ರಾಯ ಗೋಪುರ, ಧನುಷ್ಕೋಟಿ, ಅಷ್ಟ ತೀರ್ಥ ಮೊದಲಾದವು.

ಬ್ರಹ್ಮೋತ್ಸವ ಕಾಲದಲ್ಲಿ ರಾಮಾನುಜರು ಹರಿಜನರಿಗೆ ಪ್ರವೇಶಕೊಟ್ಟ ಹೂವಿನ ಪಲ್ಲಕ್ಕಿಸೇವೆಯನ್ನು ಅವರಿಗೆ ಕೊಟ್ಟರು. ಈಗಲೂ ಕೂಡ ಅವರು ತೇರಿನ ದಿನ ರಾತ್ರಿ ಹೂ ಪಲ್ಲಕಿಸೇವೆಯನ್ನು ಮಾಡುತ್ತಾ ಬರುತ್ತಿದ್ದಾರೆ. ಈ ಕ್ಷೇತ್ರವನ್ನು ಪತೀತಪಾವನಕ್ಷೇತ್ರವೆಂದು ರಾಮಾನುಜರು ಸಾರಿದರು. ಮೇಲುಕೋಟೆಯಲ್ಲಿ ನಡೆಯುವ ಈ ವೈರಮುಡಿ ಜಾತ್ರೆಗೆ ರಾಜ್ಯದ, ನೆರೆ ರಾಜ್ಯಗಳಿಂದ ಬರುವ ಭಕ್ತಾದಿಗಳಿಗೆ ಅನುಕೂಲವಾಗಲೆಂದು ಆಶೀಸಿದ ಈ ಸಣ್ಣಲೇಖನ ಸಾರ್ಥಕವಾಗಲೆಂದು ಆಶಿಸುತ್ತೇನೆ.

---

# ಗೆಲುವಾಗಲಿ!

ಶ್ರೀ ಅರ್ಚಕ ವೆಂಕಟೇಶ, ಬೆಂಗಳೂರು.

ಚಣ ಚಣದ ಬಾಳಿನಲಿ ಪಾರಿಶುದ್ಧತೆ ಇರಲಿ
ಹಣದ ವ್ಯವಹಾರದಲಿ ಎಚ್ಚರಿಕೆಯು
ಜನದ ಸಂಪರ್ಕದಲ್ಲಿ ನಿಸ್ವಾರ್ಥ ಮಾಡಿರಲಿ
ಅನುಕಂಪ ಮೈತುಂಬಿ ಬರುಕಲಿರಲಿ ! 1

ಲೋಕದಾದ್ಯಂತವೂ ದೈವತ್ವವನೆ ಕಂಡು
ತಿರಬಾಗಿ ಕೈಮುಗಿದು ಸಾಗು ಮುಂದೆ !
ಬೇಕು-ಬೇಡಗಳಲ್ಲಿ ಮೈಮರೆತು ಕಾಲವನು-
ವ್ಯರ್ಥವಾಗಿಸದಂತೆ ನೋಡು ಮುಂದೆ ! 2

ನಿತ್ಯ ಧರ್ಮಾಚರಣೆಗಾಗಿ ಸೇವೆಯುತ್ತಿರಲಿ-
ದೇಹವಿದು, ದೇಶಕ್ಕೆ ಮುಡಿಪಾಗಲಿ !
ಸತ್ಯದುಲಿ ಸಂಗೀತದಂತೆ ಕೇಳುತ್ತಿರಲಿ –
ದೇವನೊಲುಮೆಯ ಬಲದಿ ಗೆಲುವಾಗಲಿ ! 3

# ಪುರುಷಾರ್ಥ ಮತ್ತು ಸಾಧನ

ಶ್ರೀ ಟಿ. ಯಸ್. ಜಂಗಲರಾಯಪ್ಪ,
ಸ್ಕೂಲ್ ಮಾಸ್ಟರ್ & ಬಿ. ಪಿ. ಯಂ.
ತಾಡಿಗೋಳ್.

ಜೀವನ ಒಂದು ಯಾತ್ರೆ. ಇದರ ಗುರಿ ಯಾವುದೆಂಬುದನ್ನು ಪ್ರತಿಯೊಬ್ಬ ಮಾನವನೂ ತಿಳಿಯಬೇಕು. ಅದನ್ನು ಮರೆಯದೆ ತನ್ನ ದಿನಚರ್ಯೆಯನ್ನು ನಡೆಯಿಸಬೇಕು. ಸನ್ಮಾರ್ಗಾವಲಂಬನೆಯು ಸುಗಮವಲ್ಲ ಸದಾಚಾರವರ್ತನೆಯು ಸುಲಭವಲ್ಲ. ಇದಕ್ಕೆ ಕಾರಣವೇನೆಂದರೆ, ಮನೆಗಳಲ್ಲಾಗಲಿ, ವಿದ್ಯಾಶಾಲೆಗಳಲ್ಲಾಗಲೀ, ಸಾರ್ವಜನಿಕ ಸಂಸ್ಥೆಗಳಲ್ಲಾಗಲಿ, ಆಸ್ತಿಕದಿಂದ ಕೂಡಿದ ವಾತಾವರಣವು ಈ ಕಾಲದಲ್ಲಿ ವಿರಳವಾಗುತ್ತಿದೆ. ಆದುದರಿಂದ "ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್" ಎಂಬ ಭಗವದ್ವಾಣಿಯನ್ನು ನಂಬಿ, ವಿವೇಕಿಯಾದವನು ತನ್ನ ಧ್ಯೇಯವನ್ನು ತಾನು ಸಾಧಿಸಿಕೊಳ್ಳುತ್ತಾ ಜೀವನವನ್ನು ಮುಂದು ವರಿಸುತ್ತಿರಬೇಕು.

ಧ್ಯೇಯ ವೆಂದರೇನು? ಸಾಧನ ವೆಂದರೇನು? ಧರ್ಮ–ಅರ್ಥ – ಕಾಮ – ಮೋಕ್ಷ ಎಂಬುವುಗಳನ್ನು 'ಚತುರ್ವಿಧ ಪುರುಷಾರ್ಥ' ಗಳೆಂಬುದಾಗಿಯೂ, ಇವು ಕೈಗೂಡುವಂತಹ ಪ್ರಯತ್ನಗಳನ್ನು ಸಾಧನಗಳೆಂಬುದಾಗಿಯೂ ಎಲ್ಲ ಶಾಸ್ತ್ರಗಳ, ಎಲ್ಲ ಋಷಿಗಳ, ಎಲ್ಲ ಮತಾಚಾರ್ಯರ ಬೋಧೆಯಾಗಿದೆ. ಈ ನಾಲ್ಕೂ ಪ್ರತ್ಯೇಕವಲ್ಲ, ಪರಸ್ಪರ ಸಂಬಂಧವುಳ್ಳದ್ದಾಗಿವೆ. ಇಡೀ ವಿಶ್ವದ ಸೃಷ್ಟಿ, ಸ್ಥಿತಿ, ಲಯಗಳಿಗೆ ಧರ್ಮವೇ ಮೂಲವಾಗಿರುವುದರಿಂದ ನಮ್ಮ ಪ್ರಯತ್ನಗಳೆಲ್ಲವೂ ಧರ್ಮಬದ್ಧವಾಗಿರಬೇಕು. ಈ ಕಾರಣದಿಂದ ಧರ್ಮವೇ ಪ್ರಪ್ರಥಮ ಪುರುಷಾರ್ಥವೆನಿಸಿದೆ. ಕಟ್ಟಕಡೆಯ ಪುರುಷಾರ್ಥವೇ ಮೋಕ್ಷ. ಅರ್ಥವಿಲ್ಲದೆ ಯಾವ ಕಾರ್ಯವನ್ನೂ ಸಾಧಿಸುವುದಕ್ಕೆ ಆಗದಿರುವುದರಿಂದ ಅರ್ಥವನ್ನು ಆರ್ಜಿಸಬೇಕು, ಆದರೆ ಧರ್ಮಸಮ್ಮತ ರೀತಿಯಲ್ಲಿ ಮಾತ್ರವೇ ಆರ್ಜಿಸ ಬೇಕು. ಯಾವ ಯಾವ ಕಾರ್ಯಗಳಾದರೆ ಕಡೆಯೇ ಪುರುಷಾರ್ಥಕ್ಕೆ ಸಾಧಕವೆನಿಸುವುದೋ ಆ ಕಾರ್ಯಗಳು (ಅಥವಾ ಅವುಗಳ ಉದ್ದೇಶ್ಯಗಳನ್ನು) ಕಾಮನೆಗಳು ಎನ್ನಿಸಿಕೊಳ್ಳುತ್ತವೆ. ಅವುಗಳೂ ಸಹ ಧರ್ಮಕ್ಕೆ ಅವಿರೋಧವಾಗಿರಬೇಕು, ಅಲ್ಲದೇ ಅವು ಕೈಗೂಡುವುದಕ್ಕಾಗಿ ಧರ್ಮದಿಂದ ಅರ್ಜಿಸಿದ ಅರ್ಥವನ್ನು ವಿನಿಯೋಗ ಮಾಡಬೇಕು. ಧರ್ಮ ಧರ್ಮಾರ್ಜಿತವಾದ ಅರ್ಥ, ಧರ್ಮಾರ್ಜಿತ ಅರ್ಥದಿಂದ ನಿರ್ವಹಿಸಲಾಗುವ ಕಾರ್ಯ (ಅಥವಾ ಕೈಗೂಡುವ ಕಾಮನೆ) ಗಳು, ಇವುಗಳ ಫಲವಾಗಿ ಲಭ್ಯವಾಗುವ ಮೋಕ್ಷ, ಹೀಗೆ ಒಂದನ್ನೊಂದು ಓತಪ್ರೋತವಾಗಿ ಹೊಂದಿಕೊಂಡಿರುವುದೇ ಅಲ್ಲದೇ? ಎರಡು ಮೂರು–ನಾಲ್ಕನೆಯ ಪುರುಷಾರ್ಥಗಳೆಲ್ಲವೂ ಮೊಟ್ಟ ಮೊದಲನೆಯದಾದ ಧರ್ಮವನ್ನೇ ಅವಲಂಬಿಸಿಕೊಂಡಿವೆ, ಎಂಬುದು ಗಮನಾರ್ಹವಿಚಾರ. ಮೋಕ್ಷವೇ ಎಲ್ಲಮಾನವರ ಅಂತಿಮಗುರಿ.

ಅಪೌರುಷೇಯವಾದ ನಮ್ಮ ವೇದಮತದಲ್ಲಿ, ಅಥವಾ ಸನಾತನವಾದ ನಮ್ಮ ಆರ್ಯಧರ್ಮದಲ್ಲಿ, ಮೋಕ್ಷಸಾಧನೆಗೂ ನಾಲ್ಕುಮಾರ್ಗಗಳು ಉಕ್ತವಾಗಿವೆ ಅವುಗಳಿಗೆ ಕರ್ಮಯೋಗ, ಭಕ್ತಿಯೋಗ, ರಾಜಯೋಗ, ಜ್ಞಾನಯೋಗ ಎಂದು ಹೆಸರು. ಇವುಗಳೂ ಸಹ ಪುರುಷಾರ್ಥಗಳಂತೆಯೇ ಪರಸ್ಪರ ಸಂಬಂಧವುಳ್ಳ ಮಾರ್ಗಗಳೇ ಆಗಿವೆ. ಈ ನಾಲ್ಕರಲ್ಲಿ ಮೂರನೆಯದು ಉಳಿದ ಮಾರ್ಗಗಳಿಗಿಂತ ಕ್ಷಿಪ್ರವಾಗಿ ಫಲವನ್ನೀಯಬಲ್ಲದು, ಆದರೆ ಅದನ್ನು ಹಿಡಿಯುವವರು ಹೆಜ್ಜೆ

ಹೆಜ್ಜೆಗೂ ಬಹು ಎಚ್ಚರದಿಂದ ಮುನ್ನಡೆಯಬೇಕು, ಒಂದು ಸಲ ಎಡವಿದ್ದೇ ಆದರೆ ಪರಿಣಾಮವು ವಿಪರೀತ ವಾದೀತು. ಈ ಭಯದಿಂದ ಮಿಕ್ಕ ಮೂರು ಮಾರ್ಗ ಗಳನ್ನು ಅವಲಂಭಿಸುವವರ ಸಂಖ್ಯೆಯೇ ಹೆಚ್ಚು. ಈ ರಾಜಯೋಗದಲ್ಲಿಯೂ ಸಾಧಕನಿಗೆ ಎರಡು ದಾರಿ ಗಳಿವೆ. ಗುರಿಯನ್ನು ಸದಾ ಮನದಲ್ಲಿಟ್ಟು ನಿದಾನ ವಾಗಿ, ಇರುವೆಯೋಪಾದಿಯಲ್ಲಿ ಸಾಗುತ್ತಿದ್ದರೆ. ಯಾವುದೋ ಒಂದು ಕಾಲಕ್ಕೆ ಆ ಗುರಿಯನ್ನು ಮುಟ್ಟುತ್ತೇನೆ, ಎಂಬುದು ಒಂದು ದಾರಿ. ಇದರ ಪ್ರಕಾರ ಸಾಧಕನು ಕರ್ಮಾಚರಣೆಯಿಂದ ಮೊದಲು ಚಿತ್ತಶುದ್ಧಿಯನ್ನು ಪಡೆದು, ಮನೋನಿಗ್ರಹಕ್ಕಾಗಿ ಉಪಾಸನಾ ಮಾರ್ಗದಲ್ಲಿ ಮುಂದುವರಿದು, ಜ್ಞಾನ–ಯೋಗದ ಮೂಲಕವೇ ಗುರಿಯನ್ನು ಮುಟ್ಟುತ್ತಾನೆ. ಆದರೆ ಇದಕ್ಕೆ "ಪಿಪೀಲಕಮಾರ್ಗ" ವೆಂದು ಹೆಸರು ಬಂದಿದೆ. ಎರಡನೆಯದಾರಿ ಅದಕ್ಕಿಂತ ಹತ್ತಿರವಾ–ದುದು, ಆದರೆ ಅಷ್ಟಾ ಅಷ್ಟು ಕಠಿಣವಾದುದು. ಹಕ್ಕಿಯು ತನ್ನ ರೆಕ್ಕೆಗಳನ್ನು ಬಡಿಯುತ್ತಾ ಮೇಲೆ ಮೇಲೆ ಹಾರಿ ಅತ್ಯಲ್ಪಕಾಲದಲ್ಲಿ ಅಂತರಿಕ್ಷವನ್ನು ಹೇಗೆ ಮುಟ್ಟುವುದೋ, ಹಾಗೆ, ಸಾಧಕನು ಜ್ಞಾನಯೋಗ ದಿಂದಲೇ ಮೊದಲುಮಾಡಿ ಅನತಿಕಾಲದಲ್ಲೇ ಆತ್ಮ–ಜ್ಞಾನವನ್ನು ಪಡೆಯುತ್ತಾನೆ. ಇದಕ್ಕೆ "ವಿಹಂಗಮ–ಮಾರ್ಗ" ವೆಂದು ಹೆಸರು ಸಾಮಾನ್ಯಜನರಿಗೆ ಇವೆ–ರಡೂ ಕಡುದಾಗಿಯೇ ತೋರುತ್ತವೆ. ಆದಾಗ್ಯೂ ಬಹು ಭಾಗ್ಯಶಾಲಿಗಳಿಗೆ ಎರಡೂ ಸುಲಭವೆಂದು ಭಾಸ ವಾಗುವುವು. "ಮಮೇತಿ ಬಧ್ಯತೇ ಜಂತುಃ ನಿರ್ಮ ಮೇತಿ ವಿಮುಚ್ಯತೇ" ಇದು ಎಲ್ಲ ಯೋಗಿಗಳ ಅನು–ಭೂತವಾದ ದಾರಿಯಾವುದೇ ಆಗಿರಲಿ, ಮುನ್ನಡೆಯ ವೇಗವು ಹೇಗೇ ಇರಲಿ, ಜ್ಞಾನಲಾಭ ಮತ್ತು ಬ್ರಹ್ಮಾ ನಂದದ ಅನುಭವ (ಅಥವಾ ಬ್ರಹ್ಮೈಕ್ಯಾನುಸಂಧಾನ) ಗಳ ದ್ವಾರಾ ಬ್ರಹ್ಮಪ್ರಾಪ್ತಿ ಅಥವಾ ಮೋಕ್ಷವೇ ಎಲ್ಲರ ಧ್ಯೇಯವಾಗಿದೆ. ಆತ್ಮವೆಂಬುದು ನಿತ್ಯ. ನಮಗೆ ಕಾಣುತ್ತಿರುವುದೆಲ್ಲವೂ ಅನಿತ್ಯ. "ಯದ್ದೃಶ್ಯಂ ತನ್ನಶ್ಯಂ" ಇದೆಲ್ಲವೂ 'ಅನಾತ್ಮ'ವೇ ಆಗಿದೆ. 'ನಾನು'. 'ನನ್ನದು' ಎನ್ನುವ ಜೀವಿ ಅಥವಾ ವ್ಯಕ್ತಿ, ವಸ್ತುತಃ ಆ ಆತ್ಮನೇ: ಅಂದರೆ ನಿತ್ಯವೂ ಸರ್ವಗತನೂ ಸ್ಥಾಣುವೂ ಆದ ಬ್ರಹ್ಮವೇ ಆಗಿದೆ: ಇದೇ ವೇದಾಂ ತದ ಮುಖ್ಯ ಘೋಷಣೆ–ಅಂದ ಮೇಲೆ, ಬ್ರಹ್ಮಾನಂದ ಪ್ರಾಪ್ತಿ ಎಂಬ ಪರಾಕಾಷ್ಠ ದೆಸೆಯು ಪ್ರತಿಯೊಬ್ಬ ಮಾನವನ ಅಜನ್ಮಸಿದ್ಧಹಕ್ಕು ಎಂಬುದನ್ನು ಪ್ರತ್ಯೇಕ ವಾಗಿ ಹೇಳಬೇಕಾಗಿಲ್ಲ. ಕರ್ಮಾಚರಣೆಯಿಂದ ಭಕ್ತಿ ಲಾಭವಾಗುವುದು, ಭಕ್ತಿಯಿಂದ ರಾಜಯೋಗವನ್ನನು ಸರಿಸಿ, ಜ್ಞಾನವನ್ನು ಪಡೆದು, ಜ್ಞಾನದಿಂದ ಭಕ್ತಿಯ ಪರಾಕಾಷ್ಠ ದೆಸೆಯನ್ನು (ಅಂದರೆ ಮೋಕ್ಷವನ್ನು) ಸಾಧಿಸಬಹುದು ಎಂಬುದಾಗಿಯೂ ಹೇಳುತ್ತಾರೆ. ಕರ್ಮದಿಂದ ಚಿತ್ತಶುದ್ಧಿ, ಭಕ್ತಿಯಿಂದ ಮನಸ್ಥೈರ್ಯ; ಮನೋನಿಗ್ರಹದಿಂದ ಸಂಕಲ್ಪನಾಶ, ಹಾಗೂ ಜ್ಞಾನಲಾಭ, ಆದರಿಂದ ಮೋಕ್ಷಪ್ರಾಪ್ತಿ ಎಂಬುದಾಗಿಯೂ ಹೇಳುತ್ತಾರೆ. ಹೀಗೆ ಗುರಿಯನ್ನು ಯಾವ ದಾರಿಯಿಂದಲಾದರೂ ಮುಟ್ಟಬಹುದು.

"ಯೇ ಯಥಾ ಮಾಂ ಪ್ರಪದ್ಯಂತೇ ತಾಂ
ಸ್ತಥೈವ ಭಜಾಮ್ಯಹಂ"!

ಎಲ್ಲ ಮಾರ್ಗಾನುಯಾಯಿಗಳ ಆಶಯವೂ ಒಂದೇ ಆಗಿದೆ. ಕರ್ಮಯೋಗಿಯ ಸ್ವಾರ್ಥತ್ಯಾಗದ ಉದ್ದೇಶ ತನ್ನಲ್ಲಿನ ಸಣ್ಣತನದ (ಅಥವಾ ಅಹಂಭಾವದ) ದಮನ; ಭಕ್ತಶ್ರೇಷ್ಠನ ಆತ್ಮಾರ್ಪಣೆಯ ಉದ್ದೇಶವೂ ಅದೇ ಆಗಿದೆ. ಜ್ಞಾನಿಯ ಸಾಧನವೂ ಸ್ವಾರ್ಥತ್ಯಾಗವೇ ಹೌದು. ಹೀಗೆ ಸಾಧನಾ ಮಾರ್ಗಗಳಲ್ಲಿ ವೈವಿಧ್ಯಕಂಡು ಬಂದಾಗ್ಯೂ, ಮಾನವ ವರ್ಗದ ಎಲ್ಲ ತಾಪತ್ರಯಗ–ಳಿಗೂ ಮೂಲಕಾರಣವಾದ ಅಹಂಭಾವದ ಅಳಿವಿಗಾ–ಗಿಯೇ ಎಲ್ಲ ಸಾಧನಗಳೂ ಏರ್ಪಟ್ಟಿವೆ. ಸಾಧನೆಗಳು ಮುಗಿದುವೆಂದರೆ, ಎಲ್ಲರೂ ಮುಟ್ಟುವ ಗುರಿ ಒಂದೇ ಆಗಿರುವುದು.

ಕರ್ಮಯೋಗದ ಸಂಬಂಧವಾಗಿ ಎರಡು ಭಗವ–ದ್ವಾಕ್ಯಗಳನ್ನು ನೆನಪಿನಲ್ಲಿಡಬೇಕು: (1) "ಕರ್ಮ ಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ"; (ಅಂದರೆ ಜನಕಾದಿಗಳೂ ಸಹ ಕರ್ಮದಿಂದಲೇ ಅಂತಃ ಕರಣ ಶುದ್ಧಿಯನ್ನಾರ್ಜಿಸಿ ಜ್ಞಾನ ಸಿದ್ಧಿಯನ್ನೂ ಪಡೆದರು; ಆದುದರಿಂದ ಕರ್ಮಾಚರಣೆಯು ಅಗತ್ಯ;

ಅನಿವಾರ್ಯ) ಆದರೆ (2) "ಗಹನಾ ಕರ್ಮಣೋಗತಿಃ"; (ಅಂದರೆ, ಶಾಸ್ತ್ರೋಕ್ತವಾದ ಸತ್ಕರ್ಮಗಳು ಯಾವುವು, ಶಾಸ್ತ್ರವಿರುದ್ಧವಾದ ಕರ್ಮಗಳು ಯಾವುವು, ಕರ್ಮದ ಅಭಾವವೆಂದರೇನು, ಇವುಗಳನ್ನೆಲ್ಲ ತಿಳಿದು ಕರ್ಮವನ್ನು ಆಚರಿಸಬೇಕು). ಜ್ಞಾನಯೋಗಕ್ಕೆ ಸಂಬಂಧಿಸಿದಂತೆ ಎರಡು ಆಶಾಜನಕವಾದ ಭಗವದ್ಘೋಷಣೆಗಳು ಏನೆಂದರೆ: (1) "ಯಜ್ಜ್ಞಾತ್ವಾ ನೇಹಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ"; (ಅಂದರೆ ಯಾವ ಒಂದು ವಿಷಯವನ್ನು ತಿಳಿದುಕೊಂಡರೆ ಆಮೇಲೆ ತಿಳಿಯಬೇಕಾದ್ದು ಯಾವುದೂ ಇರುವುದಿಲ್ಲವೋ ಆ ವಿಷಯಕ್ಕೆ ಅನುಭವಜ್ಞಾನವೆಂದು ಹೆಸರು;) ಇಷ್ಟೇ ಅಲ್ಲದೆ, (2) ನ ಹಿ ಜ್ಞಾನೇನ ಸದೃಶಂ" ಎಂದು ಬೇರೆ ಹೇಳಿದ್ದಾನೆ. ಭಗವಂತ. ಎಷ್ಟು ಆಕರ್ಷಣೀಯ! ಆದರೆ ಅದೇನು ಅಷ್ಟು ಸುಲಭವೇ?

" ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ "

(ಅಂದಮೇಲೆ, ಭಗವತ್ಸ್ವರೂಪವನ್ನು ಯಥಾರ್ಥವಾಗಿ ತಿಳಿಯುವುದು ಬಹುಕಷ್ಟವೆಂದು ಹೇಳಿದ ಹಾಗಾಯಿತು.) ಇನ್ನು ಉಳಿದಿರುವುದು ಭಕ್ತಿಯೋಗ. ಈ ಕಾಲದಲ್ಲಿ ಸುಲಭಸಾಧ್ಯವಾದುದೆಂದರೆ ಇದೇ. ಏಕೆಂದರೆ ಭಗವಂತನು ಹೀಗೆ ಅಭಯ ಪ್ರದಾನ ಮಾಡಿದ್ದಾನೆ;" ನನ್ನನ್ನು ಅನನ್ಯಭಾವದಿಂದ ಧ್ಯಾನಮಾಡು. ಒಂದುವೇಳೆ ಇದು ಕಷ್ಟವಾದರೆ, ಪುನಃಪುನಃ ಅಭ್ಯಾಸದಿಂದ ನನ್ನನ್ನು ಹೊಂದುವುದಕ್ಕೆ ಪ್ರಯತ್ನಿಸು. ಅಭ್ಯಾಸವೂ ಚಿತ್ತನಿರೋಧವೂ ಸಾಧ್ಯವಾಗದಿದ್ದರೆ, ನನಗೆ ಪ್ರಿಯವಾದಂತಹ ಕರ್ಮಗಳನ್ನು ಮಾಡುತ್ತಿರು; ಸಿದ್ಧಿಯನ್ನು ಪಡೆಯುವಿ. ಇದೂ ಸಾಧ್ಯವಾಗದೇ ಹೋದರೆ ನನ್ನನ್ನೇ ಶರಣುಹೊಂದಿ, ಎಲ್ಲ ಕರ್ಮಗಳ ಫಲವನ್ನೂ ತ್ಯಾಗಮಾಡು, ಆಗ ನಿನಗೆ ಶಾಂತಿದೊರಕುವುದು." (ಗೀತಾ, XII 8-12).

ಇದರಲ್ಲಿ ಒಂದು ಗಹನವಾದ ವಿಷಯ ಅಡಕವಾಗಿದೆ. ಏನೆಂದರೆ, ಜ್ಞಾನಿಯ ನಿಧಿಧ್ಯಾಸನಕ್ಕಿಂತಲೂ ಅಜ್ಞಾನಿಯ ಕರ್ಮ ಫಲ ತ್ಯಾಗವು ಶ್ರೇಷ್ಠವೆಂದು ಶ್ರುತಿ ವಚನ. ಹೇಗೆಂದರೆ, ಕರ್ಮಫಲತ್ಯಾಗಮಾಡುವ ಅಜ್ಞಾನಿಗೆ "ಉಪಶಮ" ವೆಂಬ ಶಾಂತಿಯು ಬಹಬೇಗ ದೊರೆತು ಅವನು ಕ್ಷಿಪ್ರದಲ್ಲೇ ಅಮೃತನಾಗುವನಲ್ಲದೆ, ಇದೇ ದೇಹದಲ್ಲೇ ಬ್ರಹ್ಮಭಾವವನ್ನು ಹೊಂದುವನು—

" ಯದಾ ಸರ್ವೇ ಪ್ರಮುಚ್ಯಂತೇ
ಕಾಮಾಯೇಽಸ್ಯ ಹೃದಿಸ್ಥಿತಾಃ ।
ಅಥಮರ್ತ್ಯೋಽಮೃತೋಭವತ್ಯತ್ರ
ಬ್ರಹ್ಮಸಮಶ್ನುತೇ ॥

ಶಾಸ್ತ್ರವು ಮತ್ತೊಂದು ಕಡೆ ಇದೇ ಭರವಸೆಯನ್ನಿತ್ತಿದೆ:—

" ನಿರ್ವಿಶೇಷಂ ಪರಂಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ ।
ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷ ನಿರೂಪಣೈಃ ॥
ವಶೀಕೃತೇ ಮನಸ್ಯೇಷಾಂ ಸಗುಣ ಬ್ರಹ್ಮಶೀಲನಾತ್ ॥
ತದೇವಾವಿರ್ಭವೇತ್ಸಾಕ್ಷಾದಪೇತೋಪಾಧಿ ಕಲ್ಪನಮ್ ॥

ಭಕ್ತಿಯನ್ನು ಹಲವಾರು ಬಗೆಗಳಲ್ಲಿ ಆಚರಿಸಬಹುದು. ಭಕ್ತಿಯು ನವವಿಧವೆಂದು ಪ್ರಖ್ಯಾತವಾಗಿದೆ:

" ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ
ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥

ಈ ನವವಿಧ ಭಕ್ತಿಯನ್ನೇ ಶಾಸ್ತ್ರದಲ್ಲಿ ಭಾಗವತ ಧರ್ಮವೆಂದು ಹೇಳಲಾಗಿದೆ. ಹಿಂದಿನ ಯುಗಗಳ ಜನಕ್ಕೆ ಇದ್ದ ದೈಹಿಕ ಹಾಗೂ ಮಾನಸಿಕದಾರ್ಢ್ಯವು ಕಲಿಯುಗದವರೆಗೆ ಇಲ್ಲವೆಂಬುದು ಎಲ್ಲರಿಗೂ ತಿಳಿದಿದೆ. ಈ ದೌರ್ಬಲ್ಯವನ್ನು ಮೊದಲೇ ಊಹೆ ಮಾಡಿದ್ದ ತ್ರಿಕಾಲ ಜ್ಞಾನಿಗಳಾದ ಋಷಿಗಳು ಕಲಿಯುಗದಲ್ಲಿ ಕೇವಲ ಭಗವನ್ನಾಮಸ್ಮರಣೆ ಅಥವಾ ಭಗವನ್ನಾಮ ಕೀರ್ತನೆಯೊಂದರಿಂದಲೇ ಜನರು ಉದ್ಧೃತರಾಗುತ್ತಾರೆ ಎಂಬ ಭರವಸೆಯನ್ನಿತ್ತರು. ಇಂದಿನ ನಾಸ್ತಿಕ್ಯ ವಾತಾವರಣದಲ್ಲಿ, ಇಂದಿನವರ ದೌರ್ಬಲ್ಯದಲ್ಲಿ ಇಂದಿನ ಅಸಂಖ್ಯಾತ ತಾಪತ್ರಯಗಳ ಮಧ್ಯದಲ್ಲಿ ಆರ್ತರಿಗೂ ಜಿಜ್ಞಾಸುಗಳಿಗೂ ಕಂಡುಬರುವ ಏಕೈಕ ಮಾತ್ರ ಆಶಾಕಿರಣವೆಂದರೆ ಈ ಭರವಸೆ.

ಕೃತಯುಗದಲ್ಲಿ ಉಗ್ರತಪಸ್ಸಿನಿಂದ, ತ್ರೇತಾಯುಗದಲ್ಲಿ ಯಜ್ಞಯಾಗಾದಿಗಳಿಂದ, ದ್ವಾಪರಯುಗದಲ್ಲಿ ಶ್ರದ್ಧಾ ಭಕ್ತಿಗಳಿಂದ ಕೂಡಿದ ಅರ್ಚನೆಯಿಂದ, ಕಲಿಯುಗದಲ್ಲಾದರೋ ಕೇವಲ ನಾಮಕೀರ್ತನೆಯಿಂದ ಮೋಕ್ಷಪ್ರಾಪ್ತಿ. ಇದಕ್ಕೆ ಶಾಸ್ತ್ರಾಧಾರಗಳು ಹೇರಳವಾಗಿವೆ. ಉದಾಹರಣೆಗೆ; "ಭಗವದಾದಿ ಪುರುಷಸ್ಯ ನಾರಾಯಣಸ್ಯ ನಾಮೋಚ್ಚಾರಣ ಮಾತ್ರೇಣ ನಿರ್ಧೂತ ಕಲಿಃ ಭವತಿ," ಇತ್ಯಾದಿ.

ಭಗವನ್ನಾಮಸ್ಮರಣೆ – ಕೀರ್ತನೆಗಳ ಮಹಿಮೆಯನ್ನು ನಮ್ಮ ಪುಣ್ಯ ಭೂಮಿಯಲ್ಲಿ ಪ್ರಚಾರ ಮಾಡುವುದಕ್ಕಾಗಿಯೇ ಜನ್ಮ ತಾಳಿದ ಮಹಾ ಪುರುಷರು ಅನೇಕಮಂದಿ.

"ಯೇ ಶೃಣ್ವಂತಿ ಪಠಂತಿ ರಾಮಚರಿತಂ ತೇ ಯಾಂತಿ ವಿಷ್ಣೋಃ ಪದಂ" ಎಂಬುದಾಗಿ ಘೋಷಿಸಿದರು, ವಾಲ್ಮೀಕಿ ಮಹರ್ಷಿಗಳು.

ಜ್ಞಾನರಾಶಿಯಾಗಿದ್ದ ಶ್ರೀಶಂಕರಾಚಾರ್ಯರು ಹಾಡಿದರು "ಗೋವಿಂದಂ ಭಜ, ಮೂಢಮತೇ!" ಎಂದು. "ನಾಮಸ್ಮರಣಾದನ್ಯೋಪಾಯಂ ನಹಿ ಪಶ್ಯಾಮೋ ಭವತರಣೇ" ಎಂದು ಹಾಡಿದರು.

ಇತ್ತೀಚಗೆ ಈ ಬಗ್ಗೆ ಲೋಕೋಪಕಾರ ಮಾಡಿದ ಮಹನೀಯರಲ್ಲಿ ಗೋಂದಾವಲೀ ಬ್ರಹ್ಮ ಚೈತನ್ಯ ಮಹಾರಾಜರು ಪ್ರಸಿದ್ಧರು. ಅವರು ಕಣ್ಮರೆಯಾಗಿ ಕೇವಲ ಅರವತ್ತೈದು ವರ್ಷಗಳಾಗಿರ ಬಹುದು. ಅವರು ಹೇಳಿರುವ ಹಾಗೆ ನಾಮ ಜಪವು ಅತ್ಯಂತ ಸುಲಭವಾದ ಸಾಧನವಾಗಿದೆ. ಅದರಿಂದ ಅತಿ ಶೀಘ್ರವಾಗಿ ಪಾಪನಾಶವಾಗುವುದು. ಜಗತ್ತಿನಲ್ಲಿ ನಾಮದ ಮುಂದೆ ಉಳಿಯಬಲ್ಲ ಪಾಪವೇ ಇಲ್ಲ. ವೇದಾಧ್ಯಯನಕ್ಕೆ ಅನೇಕ ವರ್ಷಗಳು ಬೇಕು; ನಾಮ ಜಪಕ್ಕಾದರೋ ಕಾಲ ನಿರೀಕ್ಷೆಯೇ ಬೇಕಾಗಿಲ್ಲ. ತೀರ್ಥ ಯಾತ್ರೆಗಳೂ ಕಷ್ಟಸಾಧ್ಯವಾದ ಸಾಧನೆಗಳೇ; ನಾಮಸ್ಮರಣೆಗೆ ಯಾವ ಸಿದ್ಧತೆಗಳೂ, ಖರ್ಚುವೆಚ್ಚಗಳೂ ಬೇಕಾಗಿಲ್ಲ. ಕೂತಲ್ಲಿಯೇ ನಾಮಕೀರ್ತನೆಯದ್ವಾರ ಅಂತರಂಗ ಶುದ್ಧಿಯನ್ನು ಪಡೆಯ ಬಹುದು, ಆನಂದವನ್ನು ಅನುಭವಿಸ ಬಹುದು.

ನಾಮ ಬೇರೆಯಲ್ಲ, ಬೇರೆಯಲ್ಲ. ಭಗವಂತನ ನಾಮೋಚ್ಚಾರಣೆಯಿಂದ ಅಭಿಮಾನವು ತೊಲಗಿ ಹೋಗುವುದು, ವಾಸನಾಕ್ಷಯವಾಗುವುದು. ಮಾನವನ ಉದ್ಧಾರಕ್ಕೆ ಇವೆರಡೂ ಆಗಲೇ ಬೇಕು. ಅಷ್ಟೇ ಅಲ್ಲ. ಬ್ರಹ್ಮ ಚೈತನ್ಯರ ಮಾತಿನಲ್ಲೇ ಹೇಳಬಹುದಾದರೆ ದೇಹಕ್ಕೆ ನೀರು ಎಷ್ಟು ಅಗತ್ಯವೋ ಮನಸ್ಸಿಗೆ ನಾಮವು ಅಷ್ಟು ಅಗತ್ಯ. ನಾಮವು ಎಂದಿಗೂ ನಾಶವಾಗದಂತಹ ಆಸ್ತಿ.

ಆದುದರಿಂದ ಅದನ್ನು ಎಚ್ಚರದಿಂದ ರಕ್ಷಿಸಿಕೊಂಡಿರ ಬೇಕು. ಯಾರಾದರೆ ಅಂತ್ಯಕಾಲದಲ್ಲೂ ನಾಮಸ್ಮರಣೆ ಇರಬೇಕು; ಕಟ್ಟಕಡೆಯ ಉಸಿರುನಾಮೋಚ್ಚಾರಣೆಯಲ್ಲೇ ಹೋಗಬೇಕು– ಎಂಬುದಾಗಿ ದೃಢ ಸಂಕಲ್ಪಮಾಡಿ, ತದನುಗುಣವಾಗಿ ಅಭ್ಯಾಸಯೋಗಯುಕ್ತನಾಗಿರುತ್ತಾನೆಯೋ ಅಂತಹವನು ಜನನ ಮರಣವೆಂಬ ಚಕ್ರದಿಂದ ಮುಕ್ತನಾಗುವನೆಂಬುದರಲ್ಲಿ ಸಂಶಯವಿಲ್ಲ.

ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್।
ಯಃಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ–
ಸಂಶಯಃ ॥

ಗೀತಾ 5

ಸನಾತನ ಧರ್ಮಾವಲಂಬಿಗಳಿಗೆಲ್ಲ ಇದೇ ಪುರುಷಾರ್ಥ, ಇದೇ ಸಾಧನ.

# "ಸಪ್ತಗಿರಿ" ಕನ್ನಡ ಮಾಸಪತ್ರಿಕೆ

## ಈ ಸ್ಥಳಗಳಲ್ಲಿ ದೊರೆಯುತ್ತದೆ.

ಕರ್ನಾಟಕ:

ಕಾರ್ಯನಿರ್ವಾಹಕರು,
ತಿರುಮಲ-ತಿರುಪತಿ ದೇವಸ್ಥಾನದ–
ಸಮಾಚಾರಕೇಂದ್ರ,
೧೧. ಕೆ. ಆರ್. ಮಾರ್ಕೆಟ್ಟು, ಬೆಂಗಳೂರು–2.

ಕಾರ್ಯದರ್ಶಿ,
ತಿರುಮಲ-ತಿರುಪತಿದೇವಸ್ಥಾನದಸಮಾಚಾರಕೇಂದ್ರ,
'ಶ್ರೀನಿವಾಸಕೃಪೆ' ದಾವಣಗೆರೆ.

ಶ್ರೀ ಎಸ್. ರಾಮಕೃಷ್ಣಯ್ಯ,
ಮಾರುತಿ ಕಾಫೀವರ್ಕ್ಸ್,
ಹೊಸಪೇಟೆ, ಬಳ್ಳಾರಿ ಜಿಲ್ಲೆ.

ಶ್ರೀ ಸಿ. ಎಸ್. ಗುಂಡೂರಾವು,
೮೪೫, ಬಿ. ಬಿ. ಗಾರ್ಡನು ಸ್ಟ್ರೀಟು,
ಎಫ್. ಮೊಹಲ್ಲೆ, ಮೈಸೂರು–೪.

ಶ್ರೀ ಪರಶುರಾಮು
ರಾಮಚಂದ್ರ ಹಂಚಾತೆ,
ಹಂಚಾತೇ ಡ್ರೆಸ್ಸಸ್,
ಬ್ಯಾಂಕುರೋಡು, ಗದಗು,
ಧಾರ್ವಾಡ ಜಿಲ್ಲೆ.

ಶ್ರೀ ಕೆ. ವಿಜಯಕುಮಾರ್
ಬನಶಂಕರ ನ್ಯೂಸ್ ಏಜನ್ಸೀಸ್.
ಕಂಚಮಲ್ಲನ ಹಳ್ಳಿ,
ಕುಡ್ಲಿಗಿ (ತಾಲ್ಲೂಕು.)
ಬಳ್ಳಾರಿ ಜಿಲ್ಲೆ.

ಶ್ರೀ ಸಿ. ಪಿ. ರಾಮಕೃಷ್ಣ, ಕ್ಲಾತ್ ಮರ್ಚೆಂಟು
ಚಾಮರಾಜನಗರ್
ಮೈಸೂರು.

ಶ್ರೀ ಬಿ. ಹನುಮಂತಪ್ಪ, ಏಜಂಟು, ಎಲ್.ಐ.ಸಿ.
ಕನ್ಯಕಾಪರಮೇಶ್ವರಿ ಮಂದಿರ ಸ್ಟ್ರೀಟು
ಸಿರಿಗುಪ್ಪ.

ಶ್ರೀ ಹೆಚ್. ಶತಿ
ನ್ಯೂಸ್ ಕಾರ್ನರ್
ಸುಭಾಷ್ ಚೌಕ್,
ಧಾರವಾಡ – ೧.

ಶ್ರೀ ಹೆಚ್ ಯಸ್. ಲಕ್ಷ್ಮೀನರಸಿಂಹಯ್ಯ.
A 109, ಬೆಲ್‌ಕಾಲನಿ, ಜಲಹಳ್ಳಿ
ಬೆಂಗಳೂರು – 13.

ಶ್ರೀ ಎ ಮುನಸ್ವಾಮಿಗೌಡ,
ಓಲ್ಡ್ ಪೋಸ್ಟಾಫೀಸ್ ರೋಡ್
ಮುಲಬಾಗಲ್, ಕೋಲಾರುಜಿಲ್ಲೆ.

ಶ್ರೀಮತಿ ಡಿ. ಯಸ್. ರಾಜಗುರು,
C/o ಶ್ರೀ ಡಿ. ಎನ್. ಆರ್. ರಾಜಗುರು
ಕನ್ನಡ&ಹಿಂದೀಪಂಡಿತ್ ಪ್ರಭುತ್ವಉನ್ನತಪಾಠಶಾಲ
ದೇವದುರ್ಗ (P.O.) ರಾಯಚೂರು (Dt.)

ಜಿ. ಯಸ್. ನರಸಿಂಹಮೂರ್ತಿ,
ಶ್ರೀ ಸಾಯಿಸೇಲ್ಸ್ ಏಜನ್ಸೀಸ್
2 ನೆ. ಮೆಯಿನ್‌ರೋಡ್, ಅಶೋಕನಗರ್, ಮಂಡ್ಯ-

ಆಂಧ್ರಪ್ರದೇಶ್:

ಸೂಪರಿಂಟೆಂಡೆಂಟ್
ಶ್ರೀ ಪದ್ಮಾವತೀ ಮಂದಿರ
ತಿರುಚಾನೂರು.

ಸೂಪರಿಂಟೆಂಡೆಂಟ್
ಶ್ರೀ ಗೋವಿಂದರಾಜಸ್ವಾಮಿ ಮಂದಿರ
ತಿರುಪತಿ.

ಆಫೀಸ್ ಆಫ್ ದಿ ರಿಸೆಪ್ಷನ್ಆಫೀಸರ್
ತಿರುಮಲ.

ಸೂಪರಿಂಟೆಂಡೆಂಟ್
ಟಿ. ಟಿ. ಡಿ. ಒಂದನೆಯ ಸತ್ರ
ತಿರುಪತಿ.

ಸೂಪರಿಂಟೆಂಡೆಂಟ್
ಟಿ. ಟಿ. ಡಿ. ಮೂರನೆಯ ಸತ್ರ
ತಿರುಪತಿ.

ತಮಿಳನಾಡು:

ಟಿ. ಎನ್. ಸೋಮಸುಂದರರಾವ್
೧೫, ಕುಮಾರಸ್ವಾಮಿಆಲಯ ಬೀದಿ
ತಿರುಪತ್ತೂರ್.

ಶ್ರೀ ಶ್ರೀಕಾಂತಯ್ಯ C/O ೮.ಎಸ್. ರಾಜನ್
7/114 ಸಲಂದಿಅಮ್ಮನ್ ಕೊವೆಲ ಬೀದಿ
19, ಬ್ಲಾಕ್, ಮೆಟ್ಟೂರುಡಾಮ್.

ಅಗಸ್ತ್ಯಬಿಜಿನೆಸ್ ಪ್ರಮೋಟರ್ಸ್
34, ಮುವುನ್ಟ್‌ರೋಡ್, ಮದ್ರಾಸ್ – 35

ಮಿಕ್ಕ ಪ್ರಾಂತಗಳಲ್ಲೂ ಪತ್ರಿಕೆಯನ್ನು ಮಾರಾಟಮಾಡಲು ಏಜಂಟ್‌ಗಳು ಬೇಕು. (ಸಂ||)

---

# ಪ್ರಕಟನೆ

ಶ್ರೀಯವರ ಮಹಾಪ್ರಸಾದದ ಹಂಚಿಕೆಯ ಬಗ್ಗೆ ದೇವಸ್ಥಾನದ ನಿರ್ಣಯದಂತೆ ೧೦ ರೂಪಾಯಿಗಳಿಗಿಂತ ಹೆಚ್ಚು ಕಾಣಿಕೆ ಸಲ್ಲಿಸಿದವರಿಗೆ ಮಾತ್ರ ಮಹಾಪ್ರಸಾದವನ್ನು ಕಳುಹಿಸಲಾಗುದು. ೧೦ ರಿಂದ ೧೦೦ ರೂಪಾಯಿಗಳ ಕಾಣಿಕೆ ಸಲ್ಲಿಸಿದವರಿಗೆ ಒಂದು ಪ್ಯಾಕೆಟ್ಟು, ೧೦೦ ರೂಪಾಯಿಗಳಿಗಿಂತ ಹೆಚ್ಚಾದ ಕಾಣಿಕೆ ಸಲ್ಲಿಸಿದವರಿಗೆ ಎರಡು ಪ್ಯಾಕೆಟ್ಟುಗಳು ಕಳುಹಿಸಲಾಗುವುದು. ೧೦ ರೂಪಾಯಿಗಳಿಗಿಂತ ಕಡಿಮೆ ಸಲ್ಲಿಸಿದವರಿಗೆ ಮಹಾಪ್ರಸಾದದ ಪ್ಯಾಕೆಟ್ಟುಗಳನ್ನು ಕಳುಹಿಸಲಾಗುವುದಿಲ್ಲ. ಮತ್ತು ಇದರ ಬಗ್ಗೆ ಯಾವ ಪತ್ರ ವ್ಯವಹಾರವನ್ನೂ ನಡೆಸಲಾಗುವುದಿಲ್ಲ. ಭಕ್ತಾದಿಗಳು ಹಣ ಸೇರಿದ ರಸೀದಿಯನ್ನೇ (M. O. Acknowledgement) ತಮ್ಮ ಹರಕೆ ಸಲ್ಲಿಸಿದ ಗುರುತಾಗಿ ಭಾವಿಸಬೇಕೆಂದು ಈ ಮೂಲಕ ಕೋರಲಾಗಿದೆ.

ತಿರುಮಲ–ತಿರುಪತಿ ದೇವಸ್ಥಾನಗಳು, ತಿರುಪತಿ.

# ಹಿಂದೂ ಧರ್ಮದ ಪುನರುದ್ಧಾರಕ

# ಶ್ರೀ ಶಂಕರಾಚಾರ್ಯ

**ಲೇಖಕರು :**

ಶ್ರೀ ಲಕ್ಷ್ಮೀನರಸಿಂಹಭಟ್ಟ,

**ಕೇಂದ್ರೀಯ ಸಂಸ್ಕೃತ ವಿದ್ಯಾಪೀಠ, ತಿರುಪತಿ,**

ಜಗತ್ತಿನಲ್ಲಿ ನಾವು ಎರಡು ಶಕ್ತಿಗಳನ್ನು ಕಾಣುತ್ತಿರುತ್ತೇವೆ. ಒಂದು ಸಾತ್ವಿಕಶಕ್ತಿ: ಇನ್ನೊಂದು ಪಾಶವೀಶಕ್ತಿ–ಅನಾದಿಯಿಂದಲೂ ಇವೆರಡಕ್ಕೂ ಘರ್ಷಣೆ ಇದ್ದೇ ಇದೆ. ಕಾಲಚಕ್ರ ಉರುಳಿದಂತೆಲ್ಲ ಜನತೆಯ ಮೇಲೆ ಪಾಶವೀ ಶಕ್ತಿಯ ಪ್ರಭಾವ ಬೀಳುತ್ತಲೇ ಇರುವುದು. ಆಗ ನೈಜವಾದ ಸಾತ್ವಿಕಶಕ್ತಿಗೆ ಧಕ್ಕೆಯುಂಟಾಗಿ ಜನರಲ್ಲಿದ್ದ ಜ್ಞಾನದ ಅರಿವು ಕ್ಷೀಣವಾಗಿ, ಡಾಂಭಿಕವೃತ್ತಿಯು ಪ್ರಬಲವಾಗಿ ನಿತ್ಯವಾದ ತಿಳಿವು ಮರೆಯಾಗುವುದು. ಭರತಖಂಡದಲ್ಲಿ ಹಿಂದೊಂದು ಇಂತಹ ಸಂಧಿಗ್ಧ ಸಮಯ ಒದಗಿತ್ತು. ಸಾಮಾನ್ಯ ಜನತೆ ಧರ್ಮದ ಹೆಸರಿನಲ್ಲಿ ನೀಚಕೃತ್ಯಗಳನ್ನಾಚರಿಸಲು ಪ್ರಾರಂಭಿಸಿದ್ದಿತು. ಬೌದ್ಧಧರ್ಮರೂಪುಗೊಂಡಿತ್ತು. ಇಂತಹ ಕಾಲದಲ್ಲಿ ಶ್ರೀ ಶಂಕರರು ನಮ್ಮ ನಾಡಿನ ಬೆಳಕಾಗಿ ದೊರೆತರು. ಇವರ ಜೀವನ ಆಧ್ಯಾತ್ಮಿಕದ ಒಂದು ಹಂತ. ಧರ್ಮದ ಗುರಿಯನ್ನು ಮರೆತು ಬಾಹ್ಯವಿಷಯಗಳಿಗೆ ಗಮನವಿತ್ತು ನಡೆಯುತ್ತಿದ್ದ ಜನತೆಗೆ ತಿಳಿಯಹೇಳಿ ಧರ್ಮದ ಸತ್ಯಾರ್ಥವನ್ನು ಬೋಧಿಸಿದ ಮಹಾತ್ಮರವರು.

ಶಂಕರರ ಕಾಲದ ವಿಷಯವಾಗಿ ಅನೇಕಾಭಿಪ್ರಾಯಗಳಿವೆ. "ಶಂಕರ ವಿಜಯ" ದಲ್ಲಾಗಲೀ, ಮಠಗಳ ಪಟಾವಳಿಗಳಲ್ಲಾಗಲಿ ಶಂಕರರ ಕಾಲದ ವಿಷಯವಾಗಿ ಐಕಮತ್ಯ ಕಂಡುಬರುವುದಿಲ್ಲ. ಸಾಮಾನ್ಯವಾಗಿ ಶಂಕರರ ಕಾಲ ಕ್ರಿ. ಶ. 580–620 ಆಗಿದ್ದಿತೆಂದು ಊಹಿಸಬಹುದು. ಮಲಬಾರಿನ ಕಾಲಡಿ ಗ್ರಾಮದಲ್ಲಿ ಶಿವಗುರು ಮತ್ತು ಆರ್ಯಭಾಮಾದೇವಿ ಎಂಬ ದಂಪತಿಗಳಿಗೆ ಏಕಮಾತ್ರ ಪುತ್ರರಾಗಿ ಜನಿಸಿದ ಶಂಕರರು ಉಪನಯನವಾಗುವ ವೇಳೆಗೆ ತಂದೆಯನ್ನು ಕಳೆದುಕೊಂಡರು. ತಾಯಿ ನೆರೆಹೊರೆಯವರ ಸಹಾಯದಿಂದ ಮಗನಿಗೆ ಉಪನಯನ ಮಾಡಿಸಿ ಗುರುಗಳ ಬಳಿಗೆ ಕಳುಹಿಸಿದಳು. ಗುರುಕುಲ ಒಂದು ವ್ಯಾಜಮಾತ್ರವಾಗಿ ಶಂಕರರು ಎಳೆಯವಯಸ್ಸಿನಲ್ಲಿಯೇ ವಿದ್ಯಾಪಾರಂಗತರಾದರು. ಸಂನ್ಯಾಸಿಯಾಗಲು ಬಯಸಿದ ಶಂಕರರ ಆಸೆಯನ್ನು ತಾಯಿ ತಡೆಯಲಾಗದೆ ಅನುಮತಿಯನ್ನು ನೀಡಲೇಬೇಕಾಯಿತು. ತಾಯಿಯ ಆಶೀರ್ವಾದವನ್ನು ಪಡೆದು ಆಕೆಯ ಅವಸಾನ ಸಮಯದಲ್ಲಿ ತಾನು ಎಲ್ಲಿದ್ದರೂ ತಾಯಿಯ ಬಳಿ ಬರುವೆನೆಂದು ಭರವಸೆಯಿತ್ತು ಶ್ರೀ ಶಂಕರರು ಕಾಶಿಗೆ ತೆರಳಿದರು.

ಆ ಕಾಲದಲ್ಲಿ ಕಾಶಿ ಹಿಂದೂಸಂಸ್ಕೃತಿಯ ಕೇಂದ್ರವಾಗಿತ್ತು. ಶ್ರೀ ಶಂಕರಾಚಾರ್ಯರಿಗಿಂತಲೂ ಹಿಂದಿನಿಂದ ಅದ್ವೈತ ವೇದಾಂತದೃಷ್ಟಿಯು ಹರಿದು ಬಂದಿತ್ತು. ಶಂಕರರು ಅದನ್ನೇ ಪ್ರಸ್ಥಾನ ತ್ರಯಗಳಾದ ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತಾ ಇವುಗಳ ಆಧಾರದ ಮೇಲೆ ಸುವ್ಯವಸ್ಥಿತಗೊಳಿಸಿ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತಾರಮಾಡಿಕೊಂಡರು. ಕರ್ಮ, ಭಕ್ತಿ, ಜ್ಞಾನಗಳಿಗೆ ಉಚಿತವಾದ ಪ್ರಾಧಾನ್ಯತೆಯನ್ನಿತ್ತು ಇವೆಲ್ಲಕ್ಕೂ ಭಾಷ್ಯವನ್ನು ಬರೆಮದೇ ಅಲ್ಲದೆ ಸ್ವತಂತ್ರ ಸಿದ್ಧಾಂತಗ್ರಂಥಗಳನ್ನೂ ಬರೆದರು. ಅವೆಲ್ಲವೂ ವಿದ್ವಜ್ಜನರಿಗೆ ಮೆಚ್ಚಿಗೆಯಾದವು. ಕ್ರಮೇಣ ಅವರ ಕೀರ್ತಿ ಹರಡಿತು.

ವೇದ, ತರ್ಕ ಮತ್ತು ಅನುಭವಗಳಿಗೆ ವಿರುದ್ಧವಾದ ನೈರಾತ್ಮ್ಯವಾದವನ್ನು ಅವರು ನಿರ್ದಾಕ್ಷಿಣ್ಯವಾಗಿ ಖಂಡಿಸಿದರು.

ಭರತಖಂಡದಲ್ಲೆಲ್ಲ ತಮ್ಮ ತತ್ತ್ವವನ್ನು ಜನತೆಗೆ ಪ್ರಚಾರಮಾಡಲು ಅವರು ಮಾಹಿಷ್ಮತಿ ನಗರಕ್ಕೆ ಬಂದರು. ವಿದ್ಯಾವಂತನಾದ ಮಂಡನಮಿಶ್ರ ಮತ್ತು ಪ್ರಖ್ಯಾತ ವಿದ್ಯಾವಂತಳಾಗಿದ್ದ ಆತನ ಸತಿ ಭಾರತಿಯವರೊಡನೆ ವಾದಮಾಡಿ ಜಯಶೀಲರಾದರು. ಅವರಿಬ್ಬರೂ ತಮ್ಮ ಮಾತಿನಂತೆ ಸಂನ್ಯಾಸಿಗಳಾಗಿ ಶಂಕರಾಚಾರ್ಯರ ಶಿಷ್ಯವೃಂದದಲ್ಲಿ ಸೇರಿಹೋದರು.

ಮಾಹಿಷ್ಮತಿಯಿಂದ ಮಹಾರಾಷ್ಟ್ರಕ್ಕೆ ಅವರು ಬಂದು ಅಲ್ಲಿನ ಜನರ ಕೆಲವು ಅನಾಚಾರಗಳನ್ನು ಖಂಡಿಸಿ ಅವರಿಗೆ ವಿವೇಕೋದಯವಾಗುವಂತೆ ಮಾಡಿದರು. ಅನಂತರ ದಕ್ಷಿಣಕ್ಕೆ ಹೊರಟು ತುಂಗಾತೀರದಲ್ಲಿ ಶೃಂಗೇರಿಮಠ ಸ್ಥಾಪಿಸಿ ಅಲ್ಲಿಗೆ ಮಂಡನಮಿಶ್ರರನ್ನೇ ಸುರೇಶ್ವರಾಚಾರ್ಯರೆಂಬ ನಾಮಾಂಕಿತದಿಂದ ಅಧಿಪತಿಯನ್ನಾಗಿ ನೇಮಿಸಿದರು.

ಈ ಸಮಯದಲ್ಲಿಯೋ ತಾಯಿಯ ಸ್ಥಿತಿ ಚಿಂತಾಜನಕವೆಂಬ ಸುದ್ದಿ ತಿಳಿದು ಹಿಂದೆ ತಾವು ಮಾತಿತ್ತಂತೆ ತಾಯ ಬಳಿಗೆ ಬಂದರು. ಆತ್ಮಾನುಭವದ ಮೂರ್ತಿವೆತ್ತ ಮಗನನ್ನು ಕಂಡ ಆಕೆ ಸಂತುಷ್ಟಳಾಗಿ ಇಹಲೋಕವನ್ನು ತ್ಯಜಿಸಿದಳು. ಶವ ಸಂಸ್ಕಾರಕ್ಕೆ ನೆರೆ ಹೊರೆಯವರು ಸಹಾಯಕ್ಕೆ ಬಾರದ ಕಾರಣ ಶಂಕರರೇ ತಾಯ ದೇಹವನ್ನು ಹೊತ್ತು ಸಂಸ್ಕರಿಸಿದರು. ಸಂನ್ಯಾಸಿ ಇಂತಹ ಕ್ರಿಯೆಗಳನ್ನು ಮಾಡುವುದು ಶಾಸ್ತ್ರವಿರುದ್ಧವೆಂದವರಿಗೆ ಒಣಶಾಸ್ತ್ರದ ಕಟ್ಟಳೆಗೆ ಸಲ್ಲಬೇಕಿದ್ದ ಎಲ್ಲ ಕರ್ತವ್ಯವನ್ನೂ ಎಲ್ಲರಿಗೂ ವಿರೋಧವಾದರೂ ಮಾಡಿಯೇ ಮಾಡಿದರು.

ಅನಂತರ ದಕ್ಷಿಣವನ್ನೂ ತ್ಯಜಿಸಿ ಉತ್ತರದ ಕಾಮರೂಪಕ್ಕೆ ತೆರಳಿ ಅಭಿನವ ಗುಪ್ತರೆಂಬ ಶಾಸ್ತ್ರಭಾಷ್ಯಕಾರರೊಂದಿಗೆ ವಾದಮಾಡಿ ಗೆದ್ದು ಹಿಮಾಲಯದಲ್ಲಿರುವ ಬದರಿಗೆ ತೆರಳಿ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಶ್ರೀ ಮನ್ನಾರಾಯಣನಿಗೆ ಒಂದು ದೇವಾಲಯವನ್ನು ಕಟ್ಟಿಸಿದರು. ಕೊನೆಗೆ ಕೇದಾರನಾಥಕ್ಕೆ ತೆರಳಿ ಧವಳ ಹಿಮಾಲಯ ಪಙ್ಕ್ತಿಯ ಮಡಿಲಲ್ಲಿ ನಿರ್ವಿಕಲ್ಪ ಸಮಾಧಿಯಲ್ಲಿ ಮಲಗಿದರು. ಅವರು ದೇಹ ತ್ಯಜಿಸಿದಾಗ ಅವರಿಗೆ ಕೇವಲ ಮೂವತ್ತೆರಡು ವಯಸ್ಸು.

ಶಂಕರರ ಜೀವನ ಆಧ್ಯಾತ್ಮಿಕ ಜೀವನದ ಒಂದು ಮಹಾದಂಡಯಾತ್ರೆ. ಅಸಾಧ್ಯ ವಿಜಯ ಪರಂಪರೆಗಳನ್ನು ಗಳಿಸಿ ಹಿಂದೂಧರ್ಮವನ್ನು ಪುನಃ ಸ್ಥಾಪಿಸಿದ ಮಹಾತ್ಮರವರು. ಈ ಒಬ್ಬ ಯತೀಶ್ವರರು ಆಗಿನ ಕಾಲದಲ್ಲಿ ಅತ್ಯಲ್ಪ ಅವಧಿಯಲ್ಲಿ ಈಗಿನ ಒಂದು ಸುಧಾರಕರ ಸೇನೆ ಯಾವುದನ್ನು ಸಾಧಿಸಲಸಾಧ್ಯವೋ ಅವನ್ನು ಸಾಧಿಸಿದರು. ಅದನ್ನು ಇಪ್ಪತ್ತನೇ ಶತಾಬ್ದಿಯಲ್ಲಿ ನಿಂತ ನಾವು ನೆನಸಿಕೊಂಡರೂ ರೋಮಾಂಚವಾಗುವುದು.

ಹಿಂದೂಧರ್ಮ ನಿರ್ನಾಮವಾಗುತ್ತಿದ್ದ ಸಮಯದಲ್ಲಿ ಅದನ್ನು ಪುನಃ ಸ್ಥಾಪಿಸಿ, ಹಿಂದೂಧರ್ಮದಲ್ಲೇ ಬೆಳೆದ ಮೂಢ ನಂಬಿಕೆಯ ಕಳೆಯನ್ನು ಕಿತ್ತು, ತಮ್ಮ ಬಾಳಿನ ತಪಶ್ಶಕ್ತಿಯನ್ನು ಧಾರೆಯೆರೆದು ಹಿಂದೂ ಸಂಸ್ಕೃತಿಯ ನಾಡಿ ನಾಡಿಗಳಲ್ಲಿ ಹೊಸ ಜೀವ ಸಂಚರಿಸುವಂತೆ ಮಾಡಿದರು. ಇಂತಹ ಸುಪುತ್ರನಿಗೆ ಜನ್ಮವಿತ್ತ ತಾಯಿತಂದೆಗಳು ಧನ್ಯರು. ಅವರ ಪಾದಧೂಳಿ ಹೊತ್ತ ನಾಡು ಪುಣ್ಯಭೂಮಿ.

---

# ಆಳ್ವಾರುಗಳು

ಶ್ರೀ ಜಿ. ಯಸ್. ನರಸಿಂಹಮೂರ್ತಿ, ಮಂಡ್ಯ.

ತಮಿಳುನಾಡಿನ ವೈಷ್ಣವ ಭಕ್ತರು ಆಳ್ವಾರರೆಂಬ ಹೆಸರಿನಿಂದ ಪ್ರಸಿದ್ಧರಾಗಿರುವರು. 'ಆಳ್ವಾರ್' ಎಂಬ ಶಬ್ದಕ್ಕೆ ಮುಳುಗಿರುವವರು ಎಂದರ್ಥ. ಭಗವದನುಭವದಲ್ಲಿ ಆಳವಾಗಿ ಮುಳುಗಿ ಅದರಿಂದುಂಟಾದ ಆನಂದವನ್ನು ಮಧುರವಾದ ಗೀತೆಗಳ ರೂಪದಲ್ಲಿ ಹಾಡಿದವರು. ಇವರ ದಿವ್ಯ ಪ್ರಬಂಧಗಳೆಲ್ಲವೂ ತಮಿಳಿನಲ್ಲಿಯೇ ರಚಿಸಲ್ಪಟ್ಟವು. ಇದರಿಂದ ತಮಿಳುನಾಡಿನ ಜನತೆಯಲ್ಲಿ ಈ ಕೃತಿಗಳು ಹರಡಲು ಸಾಧ್ಯವಾಯಿತು. ಅಲ್ಲದೇ ಇವುಗಳ ಪ್ರಭಾವದಿಂದ ನಾಡಿನ ನುಡಿಗೆ ಸಂಸ್ಕೃತದಷ್ಟೇ ಗೌರವ ಬಂದಿತು. ಇದರ ಸಲುವಾಗಿ ತಮಿಳಿನ ಭಕ್ತಿ ಸಾಹಿತ್ಯಕ್ಕೆ ಒಂದು ಜೀವ ಬಂದಂತಾಯಿತು. ಆಳ್ವಾರರ ಪ್ರಬಂಧಗಳು ನಾಲಾಯಿರ ಪ್ರಬಂಧಗಳೆಂದೂ ದ್ರಾವಿಡವೇದ ಅಥವಾ ದ್ರವಿಡೋಪನಿಷತ್ತುಗಳೆಂದೂ ಖ್ಯಾತಿಗೊಂಡಿವೆ.

ಆಳ್ವಾರರ ಹಿನ್ನಲೆಯನ್ನು ಕುರಿತು ಒಂದೆರಡು ಮಾತನ್ನು ಹೇಳುವುದು ಅವಶ್ಯಕ. ಇವರು ಹನ್ನೆರಡು ಮಂದಿ. ಇವರ ಕಾಲ ನಿಷ್ಕರ್ಷೆಯ ವಿಚಾರವಾಗಿ ವಿದ್ವಾಂಸರಲ್ಲಿ ವಿವಾದ ಇದೆ. ಸಾಂಪ್ರದಾಯಿಕವಾಗಿ ಇವರು ಕ್ರಿಸ್ತಪೂರ್ವ ಮೂರು ನಾಲ್ಕು ಸಾವಿರ ವರ್ಷಗಳ ಹಿಂದಿನವರೆಂದು ನಂಬಲಾಗಿದೆ. ಆದರೆ ಚರಿತ್ರೆಯ ದೃಷ್ಟಿಯಿಂದ ಸಂಶೋಧನೆ ಮಾಡಿರುವವರು ಆಳ್ವಾರುಗಳು ಕ್ರಿ.ಶ. 7 ನೆಯ ಶತಮಾನಕ್ಕೂ 9 ನೆಯ ಶತಮಾನಕ್ಕೂ ಮಧ್ಯಕಾಲದಲ್ಲಿ ಇದ್ದರೆಂದು ಅಭಿಪ್ರಾಯ ಪಡುತ್ತಾರೆ.

ಆಳ್ವಾರರು ಸಾತ್ವತ ಅಥವಾ ಭಾಗವತ ಮತದ ಅನುಯಾಯಿಗಳು. ಇವರ ಮತಕ್ಕೆ ಪಾಂಚರಾತ್ರ ಮತವೆಂದೂ ಏಕಾಂತಿಕ ಮತವೆಂದೂ ಹೆಸರುಂಟು. ಪಾಂಚರಾತ್ರಾಗಮಗಳಲ್ಲಿ ಸೇರಿದ ಪಾದ್ಮ ತಂತ್ರದ ಈ ಶ್ಲೋಕದಿಂದ ಇವೆಲ್ಲವೂ ಒಂದೇ ಪಂಥದ ಹೆಸರಾಗಿದ್ದುವೆಂದು ವ್ಯಕ್ತವಾಗುವುದು:

"ಸೂರಿಸ್ಸುಹೃದ್ಭಾಗವತಸ್ಸಾತ್ವತಃ ಪಂಚಕಾಲವಿತ್ ।
ಏಕಾಂತಿಕಸ್ತನ್ಮಯಶ್ಚ ಪಾಂಚರಾತ್ರಿಕ ಇತ್ಯಪಿ ॥"

ಭಾಗವತ ಮತವು ಬಹು ಪ್ರಾಚೀನವಾದ ಮತ ಏಕ ದೇವೋಪಾಸನೆ. ದೇವತಾಂತರ ಪರಿತ್ಯಾಗ, ಭಕ್ತಿ ಪ್ರಪತ್ತಿಗಳ ಪಾರಮ್ಯ, ಭಗವಂತನು ಪ್ರೇಮ ಪೂರಿತನು, ಕೃಪಾಪರಿಪೂರ್ಣನು. ಜಾತಿ ಕುಲ ಸ್ತ್ರೀ ಪುರುಷ ಭೇದಗಳಿಲ್ಲದೆ, ಎಲ್ಲರಿಗೂ ಒಲಿಯುವನು ಎಂಬ ನಂಬಿಕೆ ಇವು ಅದರ ಮುಖ್ಯ ತತ್ವಗಳು.

ಆಳ್ವಾರುಗಳು ಬೋಧಿಸಿದ ತತ್ವಗಳೂ ಇವೇ. ಇವರೂ ಭಾಗತ ಪಂಥದವರು ಎಂಬುದು ಭಾಗವತ ಧರ್ಮದ ಪ್ರಮಾಣ ಗ್ರಂಥಗಳಾದ ಪಾಂಚರಾತ್ರಾಗಮಗಳು, ಮಹಾಭಾರತ, ಶಾಂತಿಪರ್ವತದ ನಾರಾಯಣೀಯ, ಭಗವದ್ಗೀತೆ, ಭಾಗವತ ಪುರಾಣ, ನಾರದರ ಮತ್ತು ಶಾಂಡಿಲ್ಯರ ಭಕ್ತಿ ಸೂತ್ರಗಳು ಇವುಗಳಿಂದ ಸ್ಥಿರಪಡುತ್ತದೆ.

ಭಾಗವತ ಮತದ ನೆರಳಿನಲ್ಲಿ ಉಚ್ಚನೀಚಗಳೆಂಬ ಭಾವನೆಗೆ ಎಡೆ ಇರಲಿಲ್ಲವೆಂಬ ಅಂಶವನ್ನು ಈ ಕೆಳಗಿನ ಶ್ಲೋಕಗಳಲ್ಲಿ ಕಾಣಬಹುದು.

ಸರ್ವೇ ಸಮಾನಾಶ್ಚತ್ವಾರೋ ಗೋತ್ರಪ್ರವರ ವರ್ಜಿತಾಃ ।
ಉತ್ಕರ್ಷೋ ನಾಪ ಕರ್ಷಶ್ಚ ಜಾತಿತಸ್ತೇಷು ಸಮ್ಮತಃ ॥
ಫಲೇಷು ನಿಸ್ಪೃಹಾಸ್ಸರ್ವೇ ದ್ವಾದಶಾಕ್ಷರ ಚಿಂತಕಾಃ ।
ಮೋಕ್ಷೈಕನಿಶ್ಚಯಾಶ್ಚಾವ ಸೂತಕಾಶೌಚ ವರ್ಜಿತಾಃ ॥

ಭಾಗವತರಿಗೆ ನಾಲ್ಕು ವರ್ಣದವರೂ ಸಮಾನರು. ಇವರಿಗೆ ಗೋತ್ರ ಪ್ರವರಗಳಿಲ್ಲ, ಜಾತಿಯಲ್ಲಿ ಹೆಚ್ಚಿನವನಿಲ್ಲ, ಕಡಮೆಯುವನಿಲ್ಲ. ಮೋಕ್ಷದ ಹೊರತು ಬೇರೊಂದು ಫಲಾಪೇಕ್ಷೆ ಇವರಿಗಿಲ್ಲ. ಇವರು 'ಓಂ ನಮೋಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರದ ಚಿಂತನೆಯಲ್ಲೇ ಕಾಲ ಕಳೆಯುವರು. ಇವರಿಗೆ ಸೂತಕ ಆಶೌಚಗಳ ಸೋಂಕಿಲ್ಲ. ಈ ರೀತಿಯ ಭಾವವನ್ನೇ ಆಳ್ವಾರರೊಬ್ಬರು 'ಕುಲಂ ತರುಮ್ ಶೆಲ್ವಂ ತಂದಿಡುಮ್,' ಅಂದರೆ ಭಗವದ್ಭಕ್ತಿಯು ಕುಲವಿಲ್ಲದವನಿಗೆ ಕುಲವನ್ನೂ ಸಿರಿಯಿಲ್ಲದವನಿಗೆ ಸಿರಿಯನ್ನೂ ತಂದುಕೊಡುತ್ತದೆಯೆಂದು ಹೇಳಿರುತ್ತಾರೆ. ಹೀಗೆ ಭಾಗವತಮತದಲ್ಲಿ ಭಕ್ತಿಪ್ರಪತ್ತಿಗಳಿಗೇ ಮುಖ್ಯಸ್ಥಾನ, ಜಾತಿಕುಲಗಳಿಗಲ್ಲ. ಸಮದರ್ಶಿತ್ವವನ್ನು ಬೋಧಿಸಿದ ಈ ಭಾಗವತ ಮತದ ಭಾವನೆಗಳಿಗೂ ತಾರತಮ್ಯದೃಷ್ಟಿಯನ್ನು ಪೋಷಿಸುತ್ತಾ ಬರುತ್ತಿದ್ದ ಕೆಲವು ಸಂಪ್ರದಾಯಗಳಿಗೂ ನಡೆದ ಘರ್ಷಣೆಯನ್ನೂ ಅದರ ಫಲವಾಗಿ ಸಂಭವಿಸಿದ ಧಾರ್ಮಿಕ ಪರಿಣಾಮಗಳನ್ನೂ ರಾಮಾನುಜರ ಮತ್ತು ತಿರುಪ್ಪಾಣಿ ಆಳ್ವಾರರ ಜೀವನಚರಿತ್ರೆಯಲ್ಲಿ ಮನಗಾಣಬಹುದು.

ಭಾಗವತ ಮತದಲ್ಲಿ ತ್ರಿಮೂರ್ತಿಗಳಲ್ಲೊಬ್ಬನಾದ ವಿಷ್ಣುವಿಗೆ ಮುಖ್ಯಸ್ಥಾನ ಕೊಟ್ಟಿದೆ. ವಿಷ್ಣುದೇವತೆಯು ಋಗ್ವೇದದ ದೇವತೆಗಳಲ್ಲಿ ಒಂದು ದೇವತೆಯಾಗಿದ್ದು, ಕ್ರಮೇಣ, ವರುಣ, ವಿಷ್ಣು, ಆದಿತ್ಯ, ಭಗ ಎಂಬ ಹೆಸರುಗಳೆಲ್ಲವೂ ಭಗವಂತನ ನಾಮಾಂಕಿತಗಳೆಂದೂ ಒಬ್ಬನೇ ಆದ ದೇವದೇವನ ಉಪಾಸನೆಯೇ ಭಾಗವತಧರ್ಮದ ಹೆಗ್ಗುರುತೆಂದೂ ಎಣಿಸಲ್ಪಟ್ಟಿತು. ಋಗ್ವೇದ ಕಾಲದಲ್ಲಿಯೇ ಬಹುದೇವ ಮತವು ಏಕದೇವೋಪಾಸನೆಯ ಕಡೆಗೆ ತಿರುಗಿದ್ದಿತು.

'ಏಕಂ ಸದ್ವಿಪ್ರಾಬಹುಧಾವದಂತಿ' ಎಂಬುದು ಇದಕ್ಕೆ ಪ್ರಮಾಣ. ಕ್ರಮೇಣ ಇದರ ಸಲುವಾಗಿ ಇಂದ್ರ, ಯಮ, ಪೂಷನ್, ಮೊದಲಾದ ದೇವತೆಗಳು ವಿಷ್ಣುವನ್ನೇ ಅಂತರ್ಯಾಮಿಯನ್ನಾಗುಳ್ಳ ದೇವತೆಗಳೆಂದು ಗಣಿಸಲ್ಪಟ್ಟರು. ವಿಷ್ಣುರ್ವ್ಯಾಪ್ತೌ' ಎಂಬ ದಾತ್ವರ್ಥದಿಂದ ಈ ಪರಾತ್ಪರ ತತ್ವವು ಸರ್ವವ್ಯಾಪಿಯಾದದ್ದು ಎಂಬ ತತ್ತ್ವವು ವಿರ್ಸಟ್ಟಿತು. ಪುರುಷಸೂಕ್ತದ ಪರಮಪುರುಷನೇ ವಿಷ್ಣುವಾದನು. ಈತನೇ ನಾರಾಯಣನೆಂದು ಉಪನಿಷತ್ತುಗಳು ಮೊಳಗಿದುವು. ಮಹಾನಾರಾಯಣೋಪಷತ್ತಿನ ಸರಣಿಯಂತೂ ಇದೇ ಮತದ ಸ್ಥಾಪನೆಗೆ ಬೆಂಬಲ ಕೊಟ್ಟಿತು.

"ಯಚ್ಚ ಕಿಂಚಿಜ್ಜಗತ್ಸರ್ವಸ್ಮಿನ್ ದೃಶ್ಯತೇ
ಶ್ರೂಯತೇಪಿವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ
ನಾರಾಯಣ ಸ್ಥಿತಃ ॥

ಎಂಬ ವಾಕ್ಯವೂ,

— ಸ ಬ್ರಹ್ಮ ಸಶಿವಃ ಸಹರಿಃ ಸೇಂದ್ರಃ ಸೋಕ್ಷರಃ
ಪರಮಃ ಸ್ವರಾಟ್ ।

ಎಂಬ ವಾಕ್ಯವೂ ಭಾಗವತ ಮತದ ಅಂತರ್ಯಾಮಿ ತತ್ತ್ವವನ್ನೂ ಏಕೇಶ್ವರೋಪಾಸನೆಯ ಮಾರ್ಗವನ್ನೂ ಹೊರ ಸೂಸುವುವು.

ಈ ಮತಕ್ಕೆ ಒಂದು ವೈಯುಕ್ತಿಕ ರೂಪವನ್ನು ಕೊಟ್ಟು ಇದನ್ನು ಒಂದು ವಿಶಿಷ್ಟವಾದ ಮಾರ್ಗದಲ್ಲಿ ಒಯ್ಯುವ ಕೆಲಸವು ವೃಷ್ಣಿ, ಯಾದವ, ಸಾತ್ವತ ಎಂಬ ಬುಡಕಟ್ಟಿಗೆ ಸೇರಿದ ಕ್ಷತ್ರಿಯವೀರನಾದ ವಾಸುದೇವ ಕೃಷ್ಣನೆಂಬವನಿಗೆ ಸೇರಿದ್ದಿತೆಂದೂ, ಈತನೇ ಭಾಗವತ ಮತದ ಪ್ರಥಮಾಚಾರ್ಯನೆಂದೂ ಐತಿಹಾಸಿಕ ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಕೃಷ್ಣ ದೇವಕೀಪುತ್ರ ನೆಂಬವನು ಘೋರ ಆಂಗೀರಸ ನೆಂಬವನ ಶಿಷ್ಯನಾಗಿದ್ದನೆಂದೂ ಭಗವನ್ ಎಂಬ ನಾಮಾಂಕಿತವಾದ ದೇವರಿಗೆ ನಮ್ಮ ಪೂಜೆಗಳೆಲ್ಲವೂ ಸಲ್ಲಬೇಕೆಂದು ಪ್ರತಿಪಾದಿಸಿದವನೆಂದೂ ಹೇಳಿದೆ. ಭಗವತ್ ಎಂಬ ದೇವರ ಉಪಾಸಕರಿಗೆ ಭಾಗವತರೆಂಬ ಹೆಸರು ಬಂದಿದೆ. ಈ ವಾಸುದೇವ ಕೃಷ್ಣನ ಕೀರ್ತಿಯು ಎಲ್ಲೆಲ್ಲೂ ಪಸರಿಸಿತು. ಇವನ ಪ್ರಭಾವವನ್ನೂ ದೈವಿಕ ಸ್ಫೂರ್ತಿಯನ್ನೂ ಮನಗಂಡ ಈತನ ಅನುಯಾಯಿಗಳು ಇವನೇ ಭಗವಂತ ಅಥವಾ ಆತನ ಅವತಾರ ಎಂದು ನಂಬಿದರು.

ಭಾಗವತಧರ್ಮದ ಪ್ರಾಚೀನತೆಯನ್ನು ಅದರ ವ್ಯಾಪ್ತಿಯನ್ನೂ ಕೆಲವು ಐತಿಹಾಸಿಕ ಅವಶೇಷಗಳು

ಕಟಪಡಿಸುವುವು. ಬೆಸ್‌ನಗರದ ಶಾಸನ ಇವುಗಳಲ್ಲಿ ಒಂದು (Epigraphia Indica Vol X Inscription No. 669). ಇದು ಉತ್ತರ ಹಿಂದೂಸ್ಥಾನದ ಬೆಸ್ ನಗರದಲ್ಲಿ ಒಂದು ಗರುಡಗಂಬದ ಮೇಲೆ ಕೆತ್ತಲ್ಪಟ್ಟಿದೆ. ಇದು ಕ್ರಿ. ಪೂ. 140 ಅಥವಾ 130 ರದೆಂದು ತೀರ್ಮಾನಿಸಲಾಗಿದೆ. ಶಾಸನದ ಲಿಪಿ ಬ್ರಾಹ್ಮೀಲಿಪಿ. ಭಾಗವತ ಮತದ ವ್ಯಾಪ್ತಿ ಮತ್ತು ಪರದೇಶದವರ ಮೇಲೆ ಇದರ ಪರಿಣಾಮ—ಇವು ಇದರಿಂದ ತಿಳಿದು ಬರುವ ಅಂಶಗಳು. ತಕ್ಷಶಿಲೆಯಲ್ಲಿ ವಾಸಮಾಡುತ್ತಿದ್ದ ಯವನ ರಾಯಬಾರಿಯಾದ ಹೆಲಿಯೋಡೋರಿಸ್ ಎಂಬವನು ಇದನ್ನು ಕೆತ್ತಿಸಿದನಂದು ವ್ಯಕ್ತವಾಗುವುದು. ಇದರ ಕನ್ನಡ ಅನುವಾದವನ್ನು ಈ ಕೆಳಗೆ ಕೊಟ್ಟಿದೆ—

"ತನ್ನ ಆಳಿಕೆಯ 14 ನೆಯ ವರ್ಷದಲ್ಲಿ ವರ್ಧಮಾನನಾಗಿರುವ ತ್ರಾತಾರನಾದ ಕಾಶೀಪುತ್ರ ಭಾಗಿಭದ್ರ ರಾಜನೆಡೆಗೆ ಅಂಟಾಲಿಕಿಡಾಸ್ ಮಹಾರಾಜನಿಂದ ಪ್ರೇಕ್ಷಿತನಾಗಿ ಯವನ ದೂತನಾಗಿ ಬಂದ ಡಿಯಾಸ್ ಎಂಬವನ ಪುತ್ರನಾದ ತಕ್ಷಶಿಲೆಯ ನಿವಾಸಿಯಾದ ಭಾಗವತನಾದ ಹೆಲಿಯೋಡೋರನಿಂದ ದೇವದೇವನಾದ ವಾಸುದೇವನಿಗೆ ಈ ಗರುಡಧ್ವಜವು ಸ್ಥಾಪಿಸಲ್ಪಟ್ಟಿತು."

"ದಯ, ತ್ಯಾಗ, ಅಪ್ರಮಾದ ಈ ಮೂರು ಅಮೃತಪದಗಳು ಅನುಷ್ಠಿತವಾದರೆ (ಅವು ಅನುಷ್ಠಾನ ಮಾಡಿದವರನ್ನು) ಸ್ವರ್ಗಕ್ಕೆ ಒಯ್ಯುವುವು."

(ಮೂರುಲೋಕಗಳನ್ನೂ ಅಳೆದ ತ್ರಿವಿಕ್ರಮನ ಮೂರಡಿಗಳಿಗೂ ಸ್ವರ್ಗಕ್ಕೆ ಒಯ್ಯುವ ಮೂರು ಗುಣಗಳಾದ ದಯ, ತ್ಯಾಗ, ಅಪ್ರಮಾದಗಳಿಗೂ ಈ ವಾಕ್ಯಗಳಲ್ಲಿ ಸೂಚನೆ ಇರುವುದನ್ನು ಪಾಠಕರು ಕಾಣಬಹುದು.)

ಈ ಶಾಸನದ ವಿಷಯವಾಗಿ ವಿನ್ಸೆಂಟ್ ಸ್ಮಿತ್ತರು ಈ ರೀತಿ ಹೇಳಿರುವರು: "ಈ ಶಾಸನಪತ್ರವು ಹಿಂದುಸ್ಥಾನದ ಧಾರ್ಮಿಕ ಇತಿಹಾಸದಲ್ಲಿ ಎರಡುರೀತಿಯಾಗಿ ಎಂದರೆ, ವಾಸುದೇವ ಭಕ್ತಿಮತದ ಪ್ರಾಚೀನತೆಯನ್ನು ಸ್ಥಾಪಿಸುವುದರಲ್ಲಿಯೂ ಮತ್ತು ಗ್ರೀಕ್ ಹೆಸರುಳ್ಳ ಗ್ರೀಕ್ ರಾಜರ ಪರಿವಾರದವರು ಹಿಂದೂದೇವತೆಗಳ ಅನುಯಾಯಿಗಳಾಗಿದ್ದರೆಂಬುದನ್ನು ಸ್ಥಾಪಿಸುವುದರಲ್ಲಿಯೂ ಪ್ರಯೋಜನಕಾರಿಯಾಗಿದೆ. (Oxford History of India by Vincent Smith P. 124)

ಸುಮಾರು ಕ್ರಿ. ಪೂ. 700 ರಿಂದ ಕ್ರಿ. ಪೂ. 250 ರವರೆಗೆ, ಎಂದರೆ ಭಗವದ್ಗೀತೆಯು ಒಂದು ನಿಷ್ಕೃಷ್ಟ ರೂಪವನ್ನು ತಾಳುವ ಹೊತ್ತಿಗೆ, ವಾಸುದೇವನಿಂದ ಉಪದೇಶಿಸಲ್ಪಟ್ಟ ಭಕ್ತಿಪಂಥವು ಅನೇಕ ಪರಿಣಾಮಗಳನ್ನು ಪಡೆಯಿತೆಂಬುದು ಈಚಿನ ವಿದ್ವಾಂಸರ ಅಭಿಪ್ರಾಯವಾಗಿದೆ. ಉಪನಿಷತ್ತಿನ ಉಪದೇಶಗಳು ಸಾಂಖ್ಯಯೋಗ ದರ್ಶನಗಳೊಡನೆ ಬೆರೆತಂತೆ ಭಗವದ್ಗೀತೆಯಿಂದ ಊಹಿಸ ಬಹುದಾಗಿದೆ. ಮಹಾಭಾರತದ ನಾರಾಯಣೀಯ ಅಧ್ಯಾಯದಿಂದ ವಿಷ್ಣುವಿನ ಅವತಾರವು ಪಾಂಚರಾತ್ರಗಮಗಳ ಹೊತ್ತಿಗೆ ಒಂದು ನಿಕರವಾದ ರೂಪವನ್ನು ತಾಳಿದಂತೆ ತೋರುವುದು. ಪಾಂಚರಾತ್ರಗಮಗಳಲ್ಲಿ ಕೊನೆಯದೆಂದು ಭಾವಿಸಲ್ಪಟ್ಟಿರುವ ಈಶ್ವರ ಸಂಹಿತೆ ಎಂಬುದು ವಿಶಿಷ್ಟಾದ್ವೈತದ ಎರಡನೆಯ ಆಚಾರ್ಯರಾದ ಯಾಮುನಾಚಾರ್ಯರಿಂದ ಉದಾಹರಿಸಲ್ಪಟ್ಟಿದೆ ಈ ಗ್ರಂಥವು ಕ್ರಿ. ಶ. 850 ರಲ್ಲಿ ಬರೆಯಲ್ಪಟ್ಟಿತೆಂದು ವಿದ್ವಾಂಸರ ಅಭಿಪ್ರಾಯ. ಈ ಸಂಹಿತೆಯಲ್ಲಿ ದ್ರಾವಿಡವೇದಕ್ಕೆ ಸೂಚನೆ ಇರುವುದರಿಂದ ೯ ನೆಯ ಶತಮಾನದ ಹೊತ್ತಿಗೆ ಆಳ್ವಾರರ ಕಾಲ ಮುಗಿದಿದ್ದಿತೆಂದೂ ಇವರು ವೈಷ್ಣವ ಸಿದ್ಧಾಂತದಲ್ಲಿ ನೆಲೆಯಾಗಿ ಸ್ಥಾಪಿಸಲ್ಪಟ್ಟಿದ್ದರೆಂದೂ ಊಹಿಸ ಬಹುದಾಗಿದೆ.

ಆಳ್ವಾರರಾದ ಮೇಲೆ ಬಂದವರು ಆಚಾರ್ಯರು ಇವರಲ್ಲಿ ಮೊದಲಿಗರು ನಾಥಮುನಿಗಳು; ಇವರು ಆಳ್ವಾರರ ಪ್ರಬಂಧಗಳನ್ನೆಲ್ಲಾ ಒಟ್ಟುಗೂಡಿಸಿದುದಲ್ಲದೆ ವಿಷ್ಣುದೇವಾಲಯಗಳಲ್ಲಿ ದೇವತಾರ್ಚನೆಯ ಸಮಯದಲ್ಲಿ ವೇದ ಮತ್ತು ಉಪನಿಷತ್ತುಗಳ ಜೊತೆಗೆ ದ್ರಾವಿಡಪ್ರಬಂಧಗಳನ್ನು ನಿತ್ಯಾನುಸಂಧಾನಮಾಡಬೇಕೆಂದು ಏರ್ಪಾಡುಮಾಡಿದರು. ಆ ಏರ್ಪಾಡು ಈಗಲೂ ಅನೂಚಾನವಾಗಿ ನಡೆದುಬರುತ್ತಿದೆ. ನಾಥಮುನಿಗಳ ತರುವಾಯ ಕ್ರಮವಾಗಿ ಆಚಾರ್ಯ ಪೀಠಕ್ಕೆ ಬಂದವರು

ಯಾಮುನಾಚಾರ್ಯರು ಮತ್ತು ರಾಮಾನುಜಾಚಾರ್ಯರು. ಇದು ಶ್ರೀವೈಷ್ಣವ ಮತದ ಪರಂಪರೆ. ರಾಮಾನುಜಾಚಾರ್ಯರಾದ ಮೇಲೆ ವಿಶಿಷ್ಟಾದ್ವೈತದ ಆಚಾರ್ಯರಲ್ಲಿ ಪ್ರಮುಖರಾದವರು ವೇಂಕಟನಾಥರು ಇವರು ವೇದಾಂತದೇಶಿಕರೆಂದೂ, ವೇದಾಂತಾಚಾರ್ಯರೆಂದೂ, ಕವಿತಾರ್ಕಿಕ ಸಿಂಹರೆಂದೂ ಪ್ರಖ್ಯಾತರಾಗಿದ್ದಾರೆ. ಈ ಶ್ರೀವೈಷ್ಣವ ಸಾಧುಸಂತರ, ಜ್ಞಾನಿಗಳ, ಭಕ್ತರ ಪರಂಪರೆಯಲ್ಲಿ ಸೇರಿದ ಆಳ್ವಾರರು ಪಲ್ಲವರ ಕಾಲಕ್ಕೆಸೇರಿದವರು. ಕ್ರಿ. ಶ. 7 ನೆಯ ಶತಮಾನದಿಂದ 9 ನೆಯ ಶತಮಾನದ ಮಧ್ಯಭಾಗದ ವರೆಗೂ ಆಳ್ವಾರರ ಕಾಲವೆನ್ನಬಹುದು. ಇವರು ತಮಿಳುನಾಡಿನ ಬೇರೆ ಬೇರೆ ಗ್ರಾಮಗಳಲ್ಲಿ ಜನಿಸಿದವರು. ತಾಮ್ರಪರ್ಣಿ, ಕೃತಮಾಲ (ವೈಗೈ), ಪಯಸ್ವಿನೀ (ಪಾಲಾರ್) ಕಾವೇರಿ ಈ ಮಹಾನದಿಗಳ ತೀರಪ್ರದೇಶಗಳಲ್ಲಿ ಅವತಾರವೆತ್ತಿದವರು. ಈ ಜೀವನದಿಗಳು ದಕ್ಷಿಣಭಾರತದಲ್ಲಿ ಹರಿದಾಡುತ್ತಾ ಜನರ ತನುಗಳನ್ನು ತಣಿಸಿದಂತೆ ಆಳ್ವಾರರ ಭಕ್ತಿಪ್ರವಾಹವು ಅವರ ಹೃದಯಗಳನ್ನು ತಣಿಸಿತು.

ಆಳ್ವಾರರಲ್ಲಿ ಎಲ್ಲಾ ಜಾತಿಯವರೂ ಇದ್ದಾರೆ; ಗಂಡಸರೂ ಇದ್ದಾರೆ, ಹೆಂಗಸರೂ ಇದ್ದಾರೆ. ಅವರಲ್ಲಿ ಒಬ್ಬರು ಕೇರಳದೇಶದ ರಾಜರಾಗಿದ್ದರು. ಇನ್ನೊಬ್ಬರು ಹೆಂಗಸು—ಆಂಡಾಳ್ ಅಥವಾ ಗೋದಾದೇವಿ. ತಿರುಪ್ಪಾಣಾಳ್ವಾರರು ಅತ್ಯಂಜರು. ನಮ್ಮಾಳ್ವಾರರು ವೆಳ್ಳಾಳರು. ತಿರುಮಂಗೈ ಕಳ್ಳರಜಾತಿಯವರು. ತಿರುಮಳಿಶೈಯವರ ಜಾತಿಯೇತಿಳಿಯದು. ಮತ್ತುಳಿದವರು ಬ್ರಾಹ್ಮಣಜಾತಿಯ ಆಳ್ವಾರರು. ಇವರೆಲ್ಲರೂ ವರ್ಣ ಭೇದ, ಸ್ತ್ರೀ ಪುರುಷಭೇದ. ಪಂಡಿತಪಾಮರರೆಂಬ ವ್ಯತ್ಯಾಸ ಗಳನ್ನಳಿದು—ಭಕ್ತಿಯೇ ಮುಕ್ತಿಯ ದಾರಿ, ಭಕ್ತಿಗೆ ಎಲ್ಲರೂ ಅಧಿಕಾರಿಗಳೆಂಬ ಭಾಗವತ ತತ್ವವನ್ನು ತಮ್ಮ ಜೀವನದ ನಡವಳಿಕೆಯ ಮೂಲಕ ತೋರಿಸಿದರು.

ಆಳ್ವಾರರ ಜೀವನ ಚರಿತ್ರೆಗೆ ನಮಗೆ ದೊರಕಿರುವ ಆಧಾರಗಳಲ್ಲಿ ಮುಖ್ಯವಾದುವು ದಿವ್ಯಸೂರಿಚರಿತ, ಪ್ರಪನ್ನಾಮೃತ ಎಂಬ ಸಂಸ್ಕೃತಗ್ರಂಥಗಳು ಮತ್ತು ಗುರು ಪರಂಪರಾ ಪ್ರಭಾವವೆಂಬ ಗ್ರಂಥ. ಗುರು ಪರಂಪರಾಪ್ರಭಾವವು ಸಂಸ್ಕೃತ ಮತ್ತು ತಮಿಳು ಮಿಶ್ರವಾದ ಮಣಿಪ್ರವಾಳವೆಂಬ ಸಾಂಪ್ರದಾಯಿಕ ಶೈಲಿಯಲ್ಲಿ ಸುಲಭ ಗ್ರಾಹ್ಯವಾಗಿ ಬರೆಯಲ್ಪಟ್ಟಿದೆ. ಆಳ್ವಾರರ ಉಪದೇಶಗಳಿಗೆ ನಾಲಾಯಿರ ಪ್ರಬಂಧಗಳೇ ಆಧಾರ. ಆಳ್ವಾರರೆಲ್ಲರೂ ತಮ್ಮ ಪ್ರಬಂಧಗಳಲ್ಲಿ ವಿಷ್ಣುವಿನ ಅರ್ಚಾವತಾರವನ್ನು ಕುರಿತು ಸ್ತುತಿಸಿದರು. ಭಗವಂತನ ಸೌಲಭ್ಯ ಸೌಶೀಲ್ಯಗಳಿಗೆ ಅರ್ಚಾವತಾರವೇ ಗುರುತೆಂದು ಇವರ ಭಾವನೆ.

ಮೇಲೆ ಹೇಳಿದ ಆಧಾರ ಗ್ರಂಥಗಳು ಆಳ್ವಾರರ ಮಹಿಮೆಯನ್ನು ಕೊಂಡಾಡುವ ಸಲುವಾಗಿ ಬರೆದ ಗ್ರಂಥಗಳು. ಇವುಗಳಲ್ಲಿ ಕವಿತೆಯ ಕಲ್ಪನೆಗಳೂ ವಾಸ್ತವಿಕ ಸಂಗತಿಗಳೂ ಬೆರೆದಿವೆ. ಆಳ್ವಾರರ ಜೀವನದಲ್ಲಿ ಅನೇಕ ಪವಾಡಗಳು ಉಲ್ಲೇಖಿಸಲ್ಪಟ್ಟಿವೆ. ಇವು ಹೇಗಾದರೂ ಇರಲಿ, ಮುಖ್ಯವಾಗಿ ಇವುಗಳಿಂದ ಆ ಕಾಲದ ಜನಸಾಮಾನ್ಯರಿಗೆ ಆಳ್ವಾರರಲ್ಲಿ ಭಕ್ತಿಪ್ರೇಮಗಳು ಎಷ್ಟು ಅಮೋಘವಾಗಿದ್ದುವೆಂಬುದು ವ್ಯಕ್ತವಾಗುವುದು.

ಆಳ್ವಾರರಲ್ಲಿ ಯಾರು ಮುಂದು ಯಾರು ಹಿಂದು ಎನ್ನುವುದರಲ್ಲಿ ಸಾಂಪ್ರದಾಯಿಕ ಪ್ರಕ್ರಿಯೆಯನ್ನೇ ಬಹುಮಟ್ಟಿಗೆ ಒಪ್ಪಬಹುದಾಗಿದೆ. ಆಕ್ರಮ ಈ ರೀತಿಯದಾಗಿದೆ — ಪೊಯ್‌ಗೈಯಾಳ್ವಾರ್ ಭೂದ್ದತ್ತಾಳ್ವಾರ್, ಪೇಯಾಳ್ವಾರ್. ತಿರುಮಳಿಶೈಯಾಳ್ವಾರ್. ಕುಲಶೇಖರಾಳ್ವಾರ್ ಪೆರಿಯಾಳ್ವಾರ್, ಆಂಡಾಳ್, ತೊಂಡರಡಿಪ್ಪೊಡಿಯಾಳ್ವಾರ್, ತಿರುಪ್ಪಾಣಾಳ್ವಾರ್, ತಿರುಮಂಗೈಯಾಳ್ವಾರ್, ನಮ್ಮಾಳ್ವಾರ್ ಮತ್ತು ಮಧುರಕವಿಯಾಳ್ವಾರ್.

—(ಸಶೇಷವು)

# ಭಾಗವತ ಧರ್ಮ

ಶ್ರೀ ಕೆ. ಎನ್. ಮುತ್ತುರಾಜು, B.SC., B.L.,
540 ಸದಾಶಿವನಗರ, ಬೆಂಗಳೂರು – 6

ಭಾಗವತರನ್ನು ಸೇವಿಸುವುದು ಉತ್ತಮೋತ್ತಮವಾದ ಧರ್ಮ. ಮೋಕ್ಷಾಭಿಲಾಷಿಗಳು ಭಗವತ್ ಕೈಂಕರ್ಯವನ್ನೂ ಆಚಾರ್ಯ ಕೈಂಕರ್ಯವನ್ನೂ ಭಾಗವತ ಕೈಂಕರ್ಯವನ್ನೂ ಅವಶ್ಯಕವಾಗಿ ಆಚರಿಸಬೇಕು. ಭಾಗವತ ಕೈಂಕರ್ಯವ ಭಗವತ್ ಕೈಂಕರ್ಯಕ್ಕಿಂತ ಶ್ರೇಷ್ಠವಾದುದು. ಆಚಾರ್ಯರ ಮತ್ತು ಭಾಗವತರ ಅನುಗ್ರಹದಲ್ಲಿ ಸಿದ್ಧಿಪಡೆದವನಿಗೆ ಭಗವಂತನ ಅನುಗ್ರಹವು ಬಹು ಸುಲಭ.

ಆತ್ಮಜ್ಞಾನಪಡೆದು ಆತ್ಮಗುಣ ಸಂಪೂರ್ಣರಾದವರೇ ಭಾಗವತರು. ಇವರು ಅಂತರಿಂದ್ರಿಯಗಳನ್ನೂ ಬಾಹ್ಯೇಂದ್ರಿಯಗಳನ್ನೂ ಜಯಿಸಿ ಭೂತದಯೆ ಯುಳ್ಳವರಾಗಿರುತ್ತಾರೆ. ವಿಷಯ ಸುಖಗಳಿಗೆ ದಾಸರಾಗಿರುವುದಿಲ್ಲ- ಕಾಮ ಕ್ರೋಧಾದಿಗಳನ್ನು ತ್ಯಜಿಸಿರುತ್ತಾರೆ, ಶಾಂತಿ ಸ್ವಭಾವವುಳ್ಳವರಾಗಿರುತ್ತಾರೆ. ಆಹಾರ ನಿಯಮಗಳನ್ನು ಪಾಲಿಸಿಕೊಂಡು, ಸುಖ ದುಃಖಗಳನ್ನು ಒಂದೇಸಮವಾಗಿ ಭಾವಿಸುತ್ತಾರೆ. ಯಾವಾಗಲೂ ಪರಬ್ರಹ್ಮನನ್ನು ಧ್ಯಾನಿಸುತ್ತಾ, ಹರಿಕಥಾ ಗಾನ ಶ್ರವಣಗಳಲ್ಲಿ ಆಸಕ್ತಿಯುಳ್ಳವರಾಗಿರುತ್ತಾರೆ. ಯಾವ ಕಾರ್ಯವನ್ನೇ ತಾವು ಕೈಗೊಂಡರೂ ಆಕಾರ್ಯವನ್ನು ಭಗವದಾರಾಧನಾರೂಪವೆಂದು ಭಾವಿಸಿ ಅದನ್ನು ಮಾಡುತ್ತಾರೆ. ಆತನಿಗೆ ಸಮಸ್ತವೂ ಬ್ರಹ್ಮಮಯವಾಗಿ ಕಾಣುತ್ತವೆ. ಇಂತಹವನು ಮಹಾತ್ಮನೆಂದೆನಿಸಿಕೊಳ್ಳುವನು. ಭಗವಂತನಿಗೆ ಅತ್ಯಂತ ಪ್ರಿಯನಾಗುವನು. ಇವರ ಹೃದಯದಲ್ಲಿ ಪರಮಾತ್ಮನು ನೆಲೆಸಿರುವನು. ನಾರದಮಹರ್ಷಿಗಳು ತಮ್ಮ ಹಿಂದಿನ ಜನ್ಮದಲ್ಲಿ ದಾಸೀಪುತ್ರರಾಗಿದ್ದು ಭಾಗವತರ ಸೇವೆ ಮಾಡಿದ್ದುದರ ಫಲವಾಗಿ ಅವರು ಸಮಸ್ತ ಪಾಪಗಳಿಂದ ವಿಮುಕ್ತರಾಗಿ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಮುಂದಿನ ಜನ್ಮದಲ್ಲಿ ಬ್ರಹ್ಮ ಪುತ್ರರಾಗಿ ದೇವ ಋಷಿ ಎನಿಸಿಕೊಂಡರು. ಭಾಗವತರು ಯಾವುದನ್ನೂ ಸ್ಪಶಿಸುವರೋ, ಮತ್ತು ಯಾವುದನ್ನು ಅನುಗ್ರಹಿಸುವರೋ ಅಂತಹ ವಸ್ತುಗಳು ಮೋಕ್ಷವನ್ನು ಪಡೆಯುತ್ತವೆ.

ಭಾಗವತ ಕೈಂಕರ್ಯವು ಭಗವತ್ಕೈಂಕರ್ಯರೂಪವಾದುದು. ಸಣ್ಣ ಆಲದ ಬೀಜದಲ್ಲಿ ಹೇಗೆ ದೊಡ್ಡವಾದ ಆಲದ ಮರವು ಅಡಗಿರುವುದೋ ಹಾಗೆ ಭಾಗವತ ಕೈಂಕರ್ಯದಲ್ಲಿ ಭಗವತ್ಕೈಂಕರ್ಯವು ಅಡಗಿರುವುದು. ವಿಷ್ಣು ಭಕ್ತರ ಪೂಜೆಗಿಂತ ಅತಿಶಯವಾದ ಪುರುಷಾರ್ಥವೇ ಇಲ್ಲ. ಭಾಗವತ ಸೇವೆಗಿಂತ ಮಿಗಿಲಾದ ಸೇವೆಯು ಬೇರೆಇಲ್ಲ ಎಂಬುದನ್ನು ಗುರು ಅನುಗ್ರಹಕ್ಕಿಂತ ಹೆಚ್ಚಾದ ಅನುಗ್ರಹವು ಮತ್ತಾವುದೂ ಇಲ್ಲ ಎಂಬುದಕ್ಕೆ ಶ್ರೀಭಗವಾನ್ ರಾಮಾನುಜರ ಜೀವನದಲ್ಲಿ ನಡೆದ ಒಂದು ಸಂದರ್ಭವನ್ನು ನೋಡಿದಲ್ಲಿ ಅದರ ಮಹಿಮೆ ಮನ ಒಪ್ಪುವಂತಿದೆ.

ಶ್ರೀ ರಾಮಾನುಜರು ಒಂದು ಸಲ ತಿರುಪತಿ ಶ್ರೀವೇಂಕಟೇಶ್ವರನ ದರ್ಶನಕ್ಕೆಂದು ಹೊರಟರು. ದಾರಿಯಲ್ಲಿ ಅಷ್ಟಸಹಸ್ರವೆಂಬ ಗ್ರಾಮ. ಆ ಗ್ರಾಮದಲ್ಲಿ ತನ್ನ ಶಿಷ್ಯರಿಬ್ಬರು ಇದ್ದರು. ಯಜ್ಞೇಶ ಮತ್ತು ವರದಾಚಾರ್ಯ. ಯಜ್ಞೇಶರು ಸ್ವಲ್ಪ ಅನುಕೂಲಸ್ಥರು. ವರದಾಚಾರ್ಯರು ದೈವಭಕ್ತರು, ಬಡವರು. ಅವರ ಜೀವನ ನಿತ್ಯ ಉಪಾದಾನದಿಂದಲೇ ಸಾಗುತ್ತಿತ್ತು- ಶ್ರೀರಾಮಾನುಜರು ತಾವು ಬರುವುದನ್ನು ಯಜ್ಞೇಶರಿಗೆ ಮುಂಚಿತವಾಗಿ ತಿಳಿಸಲು ಇಬ್ಬರು ಶಿಷ್ಯರನ್ನು ಕಳುಹಿಸಿ ಕೊಟ್ಟರು. ಶಿಷ್ಯರಿಬ್ಬರು ಬೇಗಬಂದು ಅಷ್ಟಸಹಸ್ರ ಗ್ರಾಮವನ್ನು ತಲುಪಿ ಯಜ್ಞೇಶರಿಗೆ ಗುರುಗಳು ಬರುವುದನ್ನು ತಿಳಿಸಿದರು. ಯಜ್ಞೇಶರು ಪರಮ ಸಂತೋಷದಿಂದ ಗುರುಗಳನ್ನು ಬರಮಾಡಲು ನಾನಾ ತರಹ ಏರ್ಪಾಡುಗಳನ್ನೂ ಊಟೋಪಚಾರಗಳಿಗೆ ವ್ಯವಸ್ಥೆ ಮಾಡುವುದರಲ್ಲೂ ತೊಡಗಿದ್ದ. ಸ್ವಲ್ಪಮಟ್ಟಿಗಾದರು ವಿರಾಮವಿಲ್ಲದೆ ತಳಿರು ತೋರಣಾದಿಗಳನ್ನು ನಿರ್ಮಿಸುವುದರಲ್ಲೂ ಆದರ ಸ್ವಾಗತಿ ನೀಡಲು ತಕ್ಕ ಏರ್ಪಾಡುಮಾಡುವುದರಲ್ಲೂ ನಿರತರಾಗಿ. ಶ್ರೀರಾಮಾನುಜರ ಕಡೆಯಿಂದ ಬಂದ ಭಾಗವತರ ಮಾರ್ಗಾಯಾಸವನ್ನೂ ಗಮನಕ್ಕೆ ತಂದುಕೊಳ್ಳದೆ ಕಾರ್ಯಗಳಲ್ಲಿ ನಿರತರಾಗಿ ತಲ್ಲೀನರಾದರು. ಶ್ರೀರಾಮಾನುಜರ ಶಿಷ್ಯರು ಮಾರ್ಗಾಯಾಸದಿಂದ ನೊಂದವರಾಗಿ ಮತ್ತೆ ಹಿಂತಿರುಗಿ ಮಧ್ಯಮಾರ್ಗದಲ್ಲಿ ಬರುತ್ತಿರುವ ತಮ್ಮ ಗುರುಗಳನ್ನು ಸಂಧಿಸಿ ನಡೆದೆಲ್ಲವಿಷಯವನ್ನೂ ಹೇಳಿದರು. ಶ್ರೀರಾಮಾನುಜರು ಮರು ಮಾತಾಡದೆ ಅಷ್ಟಸಹಸ್ರ ಗ್ರಾಮವನ್ನು ಸೇರಿ ನೇರವಾಗಿ ಶ್ರೀವರದಾಚಾರ್ಯರ

ಮನೆಗೆ ಹೋದರು. ವರದಾಚಾರ್ಯರು ಉಪಾದಾನಕ್ಕಾಗಿ ಹೋಗಿದ್ದರು. ಅವರ ಪತ್ನಿ ಸ್ನಾನಮಾಡಿ ಇದ್ದ ಒಂದೇ ಒಂದು ಸೀರೆಯ ಒಂದು ಕೊನೆಯನ್ನು ಮೈಗೆ ಸುತ್ತಿಕೊಂಡು ಇನ್ನೊಂದು ಕೊನೆಯನ್ನು ಬಿಸಿಲಲ್ಲಿ ಒಣಗಲು ನಿಂತಿದ್ದರು. ಶ್ರೀರಾಮಾನುಜರು ಮನೆಯೊಳಕ್ಕೆ ಪ್ರವೇಶಿಸಿ ತಾವು ಬಂದಿರುವುದನ್ನು ತಿಳಿಯ ಪಡಿಸಿದರು. ಮನೆಯಾಕೆಯು ಲಜ್ಜೆಯಿಂದ ತನ್ನ ಪರಿಸ್ಥಿತಿಯನ್ನು ತಿಳಿಸಲು ಶ್ರೀರಾಮಾನುಜರು ತಮ್ಮ ಮೈ ಮೇಲಿದ್ದ ವಸ್ತ್ರವನ್ನು ಎಸೆದರು. ಆ ವಸ್ತ್ರವನ್ನು ಸುತ್ತಿಕೊಂಡು ಆಕೆ ಹೊರಬಂದು ಆಚಾರ್ಯರಿಗೆ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಉಪಚರಿಸಿ ಆಸನವನ್ನು ಕೊಟ್ಟು ಸಾಷ್ಟಾಂಗ ನಮಸ್ಕಾರ ಮಾಡಿ ಅಂಜಲಿಬದ್ಧಳಾಗಿ ನಿಂತು "ಸ್ವಾಮಿ! ಮುಂದಿರುವ ಕೊಳದಲ್ಲಿ ಸ್ನಾನಾದಿಗಳನ್ನು ಮಾಡಿ ಬನ್ನಿ. ಆ ವೇಳೆಗೆ ನಾನು ಅಡಿಗೆಯನ್ನು ಮಾಡುತ್ತೇನೆ" ಎಂದಳು. ಆಚಾರ್ಯರು ತಮ್ಮ ಶಿಷ್ಯರೊಡನೆ ಕೊಳಕ್ಕೆ ಹೊದರು ವರದಾಚಾರ್ಯರ ಪತ್ನಿ ಲಕ್ಷ್ಮೀದೇವಿ ಒಳಗೆ ಬಂದು ನೋಡುತ್ತಾಳೆ ಮನೆಯಲ್ಲಿ ಒಂದು ಅಕ್ಕಿಕಾಳೂ ಇಲ್ಲ. ಮಾಡುವುದೇನೆಂದು ಯೋಚಿಸಿದಳು. ತಮ್ಮ ಪತಿ ಬರುವುದು ಇನ್ನೂ ತಡವಾಗುತ್ತದೆ. ಆಕೆ ಕಡು ಬಡವಳಾದರೂ ರೂಪವತಿ. ಪಕ್ಕದ ಮನೆಯಲ್ಲಿ ಶ್ರೀಮಂತನೊಬ್ಬನು ಈಕೆಯಲ್ಲಿ ಸುಖಿಸಲು ನಾನಾರೀತಿಯಲ್ಲಿ ಬಹು ಕಾಲದಿಂದ ಪ್ರಯತ್ನಪಡುತ್ತಿದ್ದ ಇದು ಲಕ್ಷ್ಮೀದೇವಿಗೆ ಗೊತ್ತಿದ್ದು ಆಗಿನ ನೆನಪು ಬಂತು. "ಈ ದೇಹದಿಂದ ನನಗೇನು ಬೇಕಾಗಿದೆ. ಗುರು ಸೇವೆ ಹೇಗೋ ಮಾಡಿದರಾಯಿತು. ಎಲ್ಲವೂ ಅವನಿಗೇ ಪ್ರೀತಿಯಾಗಲಿ" ಎಂದು ಪಕ್ಕದ ಮನೆಯ ಶ್ರೀಮಂತನಲ್ಲಿಗೆ ಹೋಗಿ ನನ್ನಲ್ಲಿ ನೀವು ಸುಖಿಸಲು ನಾನು ಸಮ್ಮತಿಸಿದ್ದೇನೆ. ನಮ್ಮ ಗುರುಗಳು ಬಂದಿದ್ದಾರೆ. ಅವರನ್ನು ಉಪಚರಿಸಲು ಮನೆಯಲ್ಲಿ ಏನೂ ಇಲ್ಲ. ಬೇಕಾದ ಸಾಮಗ್ರಿಗಳನ್ನು ಕಳುಹಿಸಿ ಕೊಡಿ. ಅವರನ್ನು ಉಪಚರಿಸಿ ಬರುತ್ತೇನೆ. ಅನಂತರ ನೀವು ಸುಖಿಸಬಹುದು" ಎಂದಳು. ಶ್ರೀಮಂತನಿಗೆ ಪರಮಸಂತೋಷವಾಯಿತು. ಬೇಕಾದ ಪದಾರ್ಥಗಳನ್ನು ಕೂಡಲೇ ಅವರ ಮನೆಗೆ ಕಳುಹಿಸಿ ಕೊಟ್ಟ.

ಲಕ್ಷ್ಮೀದೇವಿಯು ನಾನಾತರಹ ಭಕ್ಷ್ಯಗಳನ್ನು ಮಾಡಿ ಗುರುಗಳಿಗೂ ಅವರ ಶಿಷ್ಯವೃಂದಕ್ಕೂ ಬಡಿಸಿದಳು. ಗುರುಗಳು ಊಟಮಾಡಿ ತೃಪ್ತರಾದರು. ಆ ವೇಳೆಗೆ ವರದಾಚಾರ್ಯರೂ ಬಂದರು. ಗುರುಗಳನ್ನು ನೋಡಿ ಪರಮಾಶ್ಚರ್ಯದಿಂದಲೂ ಆನಂದದಿಂದಲೂ ಕೂಡಿದವರಾಗಿ ಕೂಡಲೇ ಉತ್ತರೀಯವನ್ನು ಸೊಂಟಕ್ಕೆ ಕಟ್ಟಿ ಅವರಿಗೆ ದೀರ್ಘ ದಂಡಪ್ರಣಾಮಮಾಡಿ, ಅವರೆಲ್ಲರಿಗೂ ಊಟೋಪಚಾರಗಳು ನಡೆದಿರುವುದನ್ನು ತಿಳಿದು ಆಶ್ಚರ್ಯದಿಂದ ಒಳಹೋಗಿ ನೋಡುತ್ತಾರೆ, ಅನ್ನಪೂರ್ಣಾದೇವಿ ತಾಂಡವವಾಡುತ್ತದೆ. ಪತ್ನಿಯನ್ನು ವಿಚಾರಿಸಿದರು. ಲಕ್ಷ್ಮೀದೇವಿ ನಡೆದ ವಿಷಯವನ್ನು ಹೇಳಿದಳು. ವರದಾಚಾರ್ಯರು ಬಹಳ ಸಂತೋಷಪಟ್ಟು ಪತ್ನೀ ಸಮೇತರಾಗಿ ಆಚಾರ್ಯರಲ್ಲಿಗೆ ಬಂದು ನಡೆದ ವಿಷಯವೆಲ್ಲವನ್ನೂ ಹೇಳಿ ಅವರಿಗೆ ನಮಸ್ಕಾರ ಮಾಡಿದರು. ಭಗವದ್ರಾಮಾನುಜರು ಆಶ್ಚರ್ಯದಿಂದ ಅವರನ್ನು ಆಶೀರ್ವದಿಸಿದರು. ಆ ಮೇಲೆ ವರದಾಚಾರ್ಯರು ತಮ್ಮ ಪತ್ನಿಯನ್ನು ಕರೆದುಕೊಂಡು ಸ್ವಲ್ಪ ಭಕ್ಷ್ಯಗಳನ್ನೂ ಮತ್ತು ಗುರುಗಳ ಪ್ರಸಾದವನ್ನೂ ತೆಗೆದುಕೊಂಡು ಹೋಗಿ ತಾವೇ ಪತ್ನಿಯನ್ನು ಶ್ರೀಮಂತನ ಮನೆಗೆ ಕರೆದು ಕೊಂಡು ಹೋದರು. ಆಕೆಯ ಶ್ರೀಮಂತನ ಕೋಣೆಯನ್ನು ಪ್ರವೇಶಿಸಿ ಭಕ್ಷ್ಯಗಳನ್ನೂ ಗುರುಗಳ ಪ್ರಸಾದವನ್ನೂ ಆತನಿಗೆ ಕೊಡಲು ಶ್ರೀಮಂತನು ಆಕೆಯನ್ನು ನೋಡಿದ ಕೂಡಲೆ ಸಾಕ್ಷಾತ್ ಲಕ್ಷ್ಮಿಯನ್ನೆ ನೋಡಿದಂತಾಗಿ ಮಾತೃಭಾವದಿಂದ ಆಕೆಯನ್ನು ಆದರಿಸಿ "ತಾಯೀ! ನನ್ನನ್ನು ಉದ್ಧರಿಸಿ ಉಪಕಾರ ಮಾಡಿದ್ದೀ; ನನ್ನ ಅಪರಾಧವನ್ನು ಕ್ಷಮಿಸು. ತಾಯಿ! ನಾನು ಕೇವಲ ಅಜ್ಞಾನದಿಂದ ನನ್ನ ತಾಯಿಯಲ್ಲೇ ಅನುರಕ್ತನಾಗಲು ಬಯಸಿದ್ದೆನಲ್ಲ" ಎಂದು ಪಶ್ಚಾತ್ತಾಪಪಟ್ಟನು. ಅನಂತರ ಅವರ ಜೊತೆಯಲ್ಲೇ ಬಂದು ಶ್ರೀರಾಮಾನುಜರಿಗೆ ನಮಸ್ಕರಿಸಿ ತನ್ನ ಅಪರಾಧವನ್ನು ಕ್ಷಮಿಸಲು ಯಾಚಿಸಿದನು. ರಾಮಾನುಜರು ಆತನನ್ನು ಅನುಗ್ರಹಿಸಿ ತನ್ನ ಶಿಷ್ಯನನ್ನಾಗಿ ಮಾಡಿಕೊಂಡರು. ಗುರುಕಾಶಿಯಾಗಿ ಆ ಶ್ರೀಮಂತನು ಅಪಾರ ದ್ರವ್ಯವನ್ನು ಶ್ರೀರಾಮಾನುಜರಿಗೆ ಕೊಡಲು ಅವರು ಅದನ್ನು ತಮ್ಮ ಶಿಷ್ಯನಾದ ವರದಾಚಾರ್ಯನಿಗೆ ಕೊಡಲು ಹೇಳಿದರು. ಅದಕ್ಕೆ ವರದಾಚಾರ್ಯರು "ಸ್ವಾಮಿ! ಈ ದ್ರವ್ಯವಿದ್ದಲ್ಲಿ ನಾನು ಭಗವಂತನನ್ನು ಮರೆತು ಬಿಡುತ್ತೇನೆ. ನನಗೆ ಉಪಾದಾನ ಮಾಡಿಕೊಂಡು ಬಂದು ಜೀವಿಸುವುದೇ ಲೇಸು" ಎಂದು ನಿರಾಕರಿಸಿದರು. ಆ ವೇಳೆಗೆ ಬಹಳ ಹೊತ್ತಾಗಿದ್ದು ಶ್ರೀರಾಮಾನುಜರು ಇನ್ನೂ ಬಾರದಿದ್ದುದ್ದು ನೋಡಿ ವಿಚಾರಿಸಿದಲ್ಲಿ ಅವರು ವರದಾಚಾರ್ಯರ ಮನೆಯಲ್ಲಿರುವುದು ತಿಳಿದು ಅಲ್ಲಿಗೆ ಯಜ್ಞೇಶರು ಧಾವಿಸಿ ಬಂದು ಪ್ರಣಾಮಮಾಡಿ ಕಾರಣವನ್ನು ಕೇಳಲು "ನಾನು ಬರುವುದನ್ನು ತಿಳಿಸಿದ ಭಾಗವತರನ್ನು ಉಪಚರಿಸದೆ ಅಪಚಾರ ಮಾಡಿದುದರಿಂದ ನಾನು ನಿನ್ನ ಮನೆಗೆ ಬರಲಿಲ್ಲ" ವೆಂದು ಹೇಳಲು ಯಜ್ಞೇಶರು ಖಿನ್ನರಾಗಿ ಅನುಗ್ರಹಿಸಲು ಪ್ರಾರ್ಥಿಸಿದರು. ಅದಕ್ಕೆ

ಶ್ರೀರಾಮಾನುಜರು ತಾವು ಶ್ರೀವೆಂಕಟೇಶ್ವರನ ದರ್ಶನ ಮಾಡಿಕೊಂಡು ಮರಳುವಾಗ ಒರುಪುದಾಗಿ ಹೇಳಿ ಮುಂದೆ ಪ್ರಯಾಣ ಬೆಳೆಸಿದರು.

ಹೀಗೆ ಭಾಗವತ ಸೇವೆಯ ಯಾವಕಾರಣದಿಂದಲೇ ಆಗಲಿ ಮಾಡಿದಲ್ಲಿ ಭಗವಂತನ ಸೇವೆ ಯಷ್ಟೆ ಮಹಿಮೆ ಯುಳ್ಳದ್ದಾಗಿ ಮಹಾ ಸಂಪತ್ಸಾಮ್ರಾಜ್ಯವನ್ನು ಗಳಿಸಬ ಹುದು. ಗುರು ಅನುಗ್ರಹವೇ ಇದಕ್ಕೆ ಸಾಕ್ಷಿ ಭಗವದಾರಾ ದನೆಯಲ್ಲಿ ತೊಡಗಿದ್ದವರೂ ಕೂಡಭಾಗವತರು ಬಂದಲ್ಲಿ ಆರಾಧನೆಯನ್ನು ಅಲ್ಲಿಗೇ ನಿಲ್ಲಿಸಿ ಭಾಗವತ ಸೇವೆಮಾಡಿ ಅನಂತರದಲ್ಲಿ ಆರಾಧನೆಯನ್ನು ಮುಂದು ವರಿಸ ಬೇಕು. ಭಗವಂತನು ಭಾಗವತ ರೂಪದಲ್ಲಿ ಬರುತ್ತಾನೆ. ವೈಷ್ಣವ ನನ್ನು ನಿಂದಿಸ ಬಾರದು. ವೈಷ್ಣವನಿಗೆ ಜಾತಿ ಭೇದವಿಲ್ಲ. ಶ್ರೀವೈಷ್ಣವನು ಯಾರೇ ಆಗಲಿ ಆತನು ಸಾಕ್ಷಾತ್ ವಿಷ್ಣು ಸ್ವರೂಪನು. ವೈಷ್ಣವನಲ್ಲಿ ಅಪಚಾರ ಮಾಡು ವುದು ಮಹಾ ಪಾಪ.

---

# ಶ್ರೀ ವೇಂಕಟೇಶ್ವರನ ಅಡಿದಾವರೆಗಳಲ್ಲಿ

ಶ್ರೀ ಸಿ. ವಿ. ಸತ್ಯರಾಜ್, ಬೆಂಗಳೂರು.

ಅರೆತೆರೆದ ನಯನ
ಪ್ರಫುಲ್ಲ ಚಂದ್ರವದನ
ಕಮನೀಯ ಮೂರ್ತಿ
ಪ್ರಸರಿಸಿದೆ ಎಲ್ಲೆಡೆ ನಿನ್ನಯ ಕೀರ್ತಿ

ಅಣುರೇಣು ತೃಣಕಾಷ್ಠ
ಪರಿಪೂರ್ಣ ಗೋವಿಂದ
ಆದಾರತ್ತ ನೋಡುತಿರುವೆ
ನಿನ್ನ ಚೆಂದದಾ ನೇತ್ರಂಗಳಿಂದ?

ದಿವ್ಯ ಮಂಗಳ ವಿಗ್ರಹ
ನಿನಗೇಕೆ ಬರಿಯ ಅಗ್ರಹ?
ಕೃಪೆಮಾಡು ಕರುಣಾಸಾಗರ
ಎಂದು ಬೇಡುವರಯ್ಯ ಜನಕೋಟಿ–
ವಿಸ್ತಾರ

ನಿನ್ನಯ ದರ್ಶನದ ತವಕ
ಕವಿದಿದೆ ಎನ್ನ ಮನದಲಿ ಈ ತನಕ
ನಿನ್ನ ನೋಟದಾ ಲಾಭ
ಆಗುವುದೇ ಸುಲಭ?

ಬೇಡಿದರೆ ನಿನ್ನನೇ ಬೇಡುವೆ
ಪಾಡಿದರೆ ನಿನ್ನನೇ ಪಾಡುವೆ
ಕಾಡಿದರೆ ನಿನ್ನನ್ನೇ ಕಾಡುವೆ
ಕನಿಕರಿಸುವೆಯಾ ಪ್ರಭುವೇ?

# ತಿರುಮಲ ತಿರುಪತಿ ದೇವಸ್ಥಾನ, ತಿರುಪತಿ.

ತಿರುಮಲೆ ತಿರುಪತಿಗಳಲ್ಲಿ ದೇವಸ್ಥಾನದ ಆಡಳಿಕೆಯಲ್ಲಿರುವ ಸತ್ರಗಳಲ್ಲಿನ ಸುಸಜ್ಜಿತ ಕೋಠಡಿಗಳು, ಕಾಟೇಜ್‍ಗಳನ್ನು ಕೆಳಗೆ ಸೂಚಿಸಲ್ಪಟ್ಟ ಹಣವನ್ನು ಪಾವತಿ ಮಾಡಿ, ಮೀಸಲಾಗಿಟ್ಟುಕೊಳ್ಳ ಬಹುದು.

**ತಿರುಮಲ:**

| | |
|---|---|
| ೧. ಶ್ರೀವೇಂಕಟೇಶ್ವರ ಅತಿಥಿ ಭವನ | ರೂ. 16/- ಒಂದು ಕೋಠಡಿಯದು<br>ರೂ. 20/- ಮೂಲೆಯಲ್ಲಿರುವ ಕೋಠಡಿ |
| ೨. ಶ್ರೀನಿವಾಸ (ಟಿ.ಬಿ.ಸಿ.), ವೇಂಕಟಾಚಲ, (ಯಂ.ಬಿ.ಸಿ) ಆಳ್ವಾರ್‌ನಗರ್ ಭವನಗಳು | ರೂ. 16/-, 20/- ಪೂರ್ತಿ ಕಾಟೇಜಿಗಾಗಿ<br>ರೂ. 7/-, 9/- ಅರ್ಧ ಕಾಟೇಜಿಗಾಗಿ |
| ೩. ವ್ಯಾಲೀವ್ಯೂ; ನಾರಾಯಣಗಿರಿ ಭವನಗಳು. | ರೂ. 10/- ಪೂರ್ತಿ ಕಾಟೇಜಿ<br>ರೂ. 5/- ಅರ್ಧ ಕಾಟೇಜಿ |

**ತಿರುಪತಿ:**

| | |
|---|---|
| ೧. ದೇವಸ್ಥಾನ ಅತಿಥಿಗೃಹ | ರೂ. 10/- |
| ೨. ಶ್ರೀನಿವಾಸ ಧರ್ಮಶಾಲೆ (೧ ನೆಯ ಸತ್ರ) (ಸಜ್ಜಿತ ಕೋಠಡಿಗಳು) | ರೂ. 8/- |
| ೩. ಶ್ರೀಗೋವಿಂದರಾಜಸ್ವಾಮಿ ಧರ್ಮಶಾಲೆ (೨ ನೆಯ ಸತ್ರ) ಸಜ್ಜಿತ, ಕೋಠಡಿಗಳು | ರೂ. 6/- |

ತಿರುಮಲೆ, ತಿರುಪತಿಗಳಲ್ಲಿನ ದೇವಸ್ಥಾನದ ಸತ್ರಗಳಲ್ಲಿ, ಮಿಕ್ಕವಸತಿ ಉಚಿತವಾಗಿಯೇ ಕೊಡಲ್ಪಡುತ್ತದೆ.

---

ಈ ಸೌಕರ್ಯವನ್ನು ಕೋರುವವರು, ತಕ್ಕ ಹಣವನ್ನು, ಪ್ರಯಾಣದ ತಾರೀಖು; ಬರುವ ಸದಸ್ಯರ ಸಂಖ್ಯೆ, ಎಲ್ಲಿ ವಸತಿ ಕೊರುವುದು ಮುಂತಾದ ವಿಷಯಗಳನ್ನು ತಿಳಿಸುತ್ತಾ ರಿಸೆಪ್ಷನ್ ಆಫೀಸರ್ ತಿರುಪತಿ/ತಿರುಮಲ ವಿಳಾಸಕ್ಕೆ ಕಳುಹಿಸ ಬೇಕು.

ಮಿಕ್ಕ ವಿವರಗಳನ್ನು ತಿರುಪತಿ ತಿರುಮಲೆಗಳಲ್ಲಿನ ರಿಸೆಪ್ಷನ್ ಆಫೀಸರುಗಳಿಂದ ಪಡೆಯ ಬಹುದು.

ಕಾರ್ಯನಿರ್ವಹಣಾಧಿಕಾರಿ.

॥ ಶ್ರೀಃ ॥

# ರಹಸ್ಯತ್ರಯಸಾರ

ವಿದ್ವಾವಿಶಾರದ ಎಸ್. ಎಂ. ಶ್ರೀನಿವಾಸಾವರದಾಚಾರ್ಯ,
ವ್ಯಾಕರಣ ಉಪಪ್ರಾಧ್ಯಾಪಕರು, ಸಂಸ್ಕೃತ ಮಹಾಪಾಠಶಾಲಾ, ಮೈಸೂರು.

(ಹಿಂದಿನ ಸಂಚಿಕೆಯ ತರುವಾಯ)

ಈಶ್ವರನಿಗೆ ಪರಾಪೇಕ್ಷೆಯಿಂದ ರಕ್ಷಿಸಿದರೆ ಸ್ವಾತಂತ್ರ್ಯವು ಕುಂಠಿತವಾಗುವುದರಿಂದ ಉಪಾಯಾಪೇಕ್ಷೆ ಇಲ್ಲದೇನೆಯೇ ರಕ್ಷಿಸ ಬಹುದಲ್ಲವೇ? ಎಂದರೆ ಮೇಲೆ ನಿರೂಪಿಸಲ್ಪಟ್ಟ ದೃಷ್ಟಾಂತದಂತೆ ಸರ್ವೇಶ್ವರನು ತನ್ನ ಸಂಕಲ್ಪದಿಂದಲೇ (ಭಕ್ತಿಯೋಗ,) ಶರಣಾಗತಿ ಮೂಲಕ ತನ್ನ ಪ್ರಸಾದವುಂಟಾಗಲು ಸಾಧನಾಭಾವವನ್ನು ವ್ಯವಸ್ಥೆಮಾಡಿರುವುದರಿಂದ ಇವನ ಈಶ್ವರತ್ವಕ್ಕೆ ಯಾವ ಧಕ್ಕೆಯೂ ಬರುವುದಿಲ್ಲ. ಆದ್ದರಿಂದ ಈ ವಿಧ ಚೋದನೆಯು ನಿರರ್ಥಕ. ನಾವೆಲ್ಲಾ ಈಶ್ವರನಿಗೆ ಶರೀರಸ್ಥಾನದಲ್ಲಿ ನಿಲ್ಲುವುದರಿಂದ ಈಶ್ವರನು ಸರ್ವಶರೀರಿ ಆಗುತ್ತಾನೆ. ಶರೀರ ರಕ್ಷಣೆಯು ಆತ್ಮನಿಗೆ ಸೇರಿದ ಹಾಗೆ ನಮ್ಮ ರಕ್ಷಣೆಯು ಈಶ್ವರನಿಗೇನೆ ಸೇರಿದ್ದು. ಶರೀರ ವೆಂದರೆ ಪ್ರಾಕೃತವಾದ ಇಂದ್ರಿಯಾದಿಗಳಿಗೆ ಆಶ್ರಯವಾದ ವಸ್ತು ಎಂದು ಅರ್ಥವಲ್ಲಾ. ಪರಮಾತ್ಮನಿಗೇನೇ ನಿಯಾಮ್ಯನಾಗಿಯೂ, ಶೇಷಭೂತನಾಗಿಯೂ, ಅವನಿಂದಲೇ ಧರಿಸಲ್ಪಟ್ಟದ್ದು ಎಂದು ತಾತ್ಪರ್ಯ. ಅವನು ನಿಯಾಮಕ, ನಾವು ನಿಯಾಮ್ಯರು ಆದ್ದರಿಂದ ಅವನ ನಿಯಮದಂತೆ ಯಾವ ಚೋದನೆಯನ್ನೂ ಮಾಡದೇ ಆಚರಿಸಬೇಕಲ್ಲವೆ? ಅವನು ಶೇಷ ಅಂದರೆ ಸ್ವಾಮಿ ಯಾದ್ದರಿಂದ ಅವನ ಪ್ರೀತಿಯೇ ಮುಖ್ಯವಾದ ಫಲ. ಸ್ವಭೋಗವು ಅಪ್ರಧಾನವಾದದ್ದು. ಈ ವಿಧವಾದ ಸಂಬಂಧ ಅಂದರೆ ಶರೀರಾತ್ಮಭಾವವನ್ನು ನಮ್ಮ ಸಿದ್ಧಾಂತಕ್ಕೆ ಅಸಾಧಾರಣವಾದುದನ್ನು ಅನವರತವೂ ಅನುಸಂಧಾನ ಮಾಡುತ್ತಿದ್ದರೆ ಯಾವ ವಿಧವಾದ ಭ್ರಮಕ್ಕೂ ಅವಕಾಶವಿರುವುದಿಲ್ಲ.

ಉಪಾಯಾನುಷ್ಠಾನ ಮಾಡಿದ ನಂತರ ಸತ್ಯಸಂಕಲ್ಪನಾದವನು ಫಲವನ್ನು ಕೊಟ್ಟೇಕೊಡುವುದರಿಂದ ನಾವು ಸ್ವೇಚ್ಛಾವಿಹಾರಿಯಾಗಿರಬಹುದೇ ಎಂದರೆ ಇದು ಸ್ವರೂಪಕ್ಕೆ ವಿರುದ್ಧವಾದ್ದರಿಂದ ಈ ರೀತಿ ಮಾಡಕೂಡದು. ಅವನ ಆಜ್ಞೆಯಂತೆಯೇ ದೇಹವಿರುವ ಪರ್ಯಂತವೂ ನಡೆದುಕೊಳ್ಳ ಬೇಕು. ಅಕಸ್ಮಾತ್ತಾಗಿ ಪಾಪ ಸಂಭವಿಸಿದರೆ ಇದಕ್ಕೆ ಶಕ್ಯಾನುಗುಣವಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಭಗವತ್ಕೈಂಕರ್ಯಕ್ಕೆ ಯೋಗ್ಯವಾದ ಸ್ಥಳವಿಶೇಷವೇ ವಾಸಕ್ಕೆ ಯೋಗ್ಯವಾದದ್ದು. ಕಾಶಿ, ಕಾಂಚೀ ಮುಂತಾದ ಪುಣ್ಯಕ್ಷೇತ್ರಗಳೇ ಆಗಬೇಕೆಂಬ ನಿಯಮವಿಲ್ಲ. ಶಬರೀ ದೃಷ್ಟಾಂತದಿಂದ ಇಂಥ ಭಾಗವತಾಧಿಷ್ಠಿತವಾದ ದೇಶವೇ ಪುಣ್ಯಕ್ಷೇತ್ರವಾಗುತ್ತದೆ. ಆದ್ದರಿಂದ ವಾಸಸ್ಥಾನಕ್ಕಾಗಿ ಚಿಂತಿಸಬಾರದು. ಈ ರೀತಿ ತತ್ತ್ವಗಳನ್ನು ಅರಿತು ಉಪಾಯವನ್ನೂ ಮೋಕ್ಷವಿರೋಧಿಯಾದ ಪಾಪಗಳನ್ನೂ ಹೋಗಲಾಡಿಸಿಕೊಳ್ಳಲು ಪ್ರಾಯಶ್ಚಿತ್ತ ರೂಪವಾಗಿ ಆಚರಿಸಬೇಕು. ಈ ರೀತಿ ಇದ್ದವರು ಸ್ವಲ್ಪವೂ ಆತ್ಮೋತ್ಕರ್ಷವನ್ನು ಹೊಂದಕೂಡದು. ಲೋಕದಲ್ಲಿರುವ ಚೇತನಾಚೇತನ ವಸ್ತುಗಳೆಲ್ಲಾ ಭಗವಚ್ಛರೀರವೆಂದೂ, ಕಾಮಕ್ರೋಧಗಳಿಂದ ಇತರರಿಗೆ ದುಃಖವನ್ನು ಉಂಟುಮಾಡಿದರೆ "ಶರೀರಕ್ಕೆ ಏಟುಕೊಟ್ಟರೆ ಶರೀರಿಯಾದ ಆತ್ಮನಿಗೆ ದುಃಖ ಉಂಟಾಗುವಂತೆ ಸರ್ವಶರೀರಿಯಾದ ಜಗತ್ಪಿತೃವಿಗೆ ದುಃಖ ಉಂಟಾಗುವುದರಿಂದ ಎಲ್ಲರಲ್ಲೂ ಭ್ರಾತೃಭಾವದಿಂದಲೇ ಇದ್ದು, ಇವರಿಗೆಲ್ಲಾ ಈಶ್ವರನ ಅಭಿಮುಖ್ಯ

ವನ್ನು ಉಂಟುಮಾಡಿಸುತ್ತಾ ಅಂಗೀಕೃತವಾದ ಪ್ರಾರಬ್ಧ ಕರ್ಮವು ಅನುಭವದಿಂದಲೇ ವಿನಾಶ್ಯವಾದ್ದರಿಂದ ತನ್ಮೂಲಕವಾಗಿ ಬರುತ್ತಿರುವ ಸುಖದುಃಖಗಳನ್ನೆಲ್ಲಾ ಅನುಭವಿಸಬೇಕು ಮುಂದೆ ಅಂದರೆ ನಿರ್ಯಾಣವಾದನಂತರ ಅರ್ಚಿರಾದಿ ಮಾರ್ಗವಾಗಿ ಆತಿವಾಹಕರು ಬಂದು ಕರೆದುಕೊಂಡು ಹೋಗುತ್ತಾರೆ. ನಂತರ ವಿರಜಾನದಿಯನ್ನು ಸಂಕಲ್ಪದಿಂದಲೇ ದಾಟಿ ಅಪ್ರಾಕೃತವಾದ ಬ್ರಹ್ಮಾಲಂಕಾರಗಳಿಂದ ಭೂಷಿತನಾಗಿ ಪರಮಪದದಲ್ಲಿ ದಿವ್ಯಪರ್ಯಂಕಾರೂಢನಾದ ಶ್ರಿಯಃಪತಿಯನ್ನು ಹೊಂದಿ ಅವನೊಡನೆ ನಾವೂ ಸಹ ಸಕಲ ವಿಧವಾದ ದಿವ್ಯಭೋಗವನ್ನು ಅನುಭವಿಸಿಕೊಂಡು ಪೂರ್ಣಾನಂದದಿಂದ ಇರುತ್ತೇವೆ ಈ ಆನಂದವೂ "ಕದಾ ಕದಾ" ಎಂದು ನಿರೀಕ್ಷಿಸುತ್ತಾ ಉಪಾಯಾನುಷ್ಠಾನ ಮಾಡಿದ್ದರಿಂದ ಕೃತಕೃತ್ಯರಾಗಿಯೂ ಮೋಕ್ಷಕ್ಕೆ ಉಪಯುಕ್ತವಾದ ಭಾವವನ್ನು ಅವನಲ್ಲೇ ನ್ಯಾಸಮಾಡಿದ್ದರಿಂದ ನಿರ್ಭರವಾಗಿಯೂ ಇದರಲ್ಲಿ ನಿಸ್ಸಂಶಯರಾಗಿಯೂ ಇದ್ದರೆ ಸುಖದಿಂದಲೇ ಈ ಲೋಕದಲ್ಲೂ ಇರಬಹುದು ಎಂಬ ಧೈರ್ಯವನ್ನು ಉಂಟುಮಾಡಿದ್ದಾರೆ ಆಚಾರ್ಯರು.

ಅನಂತರ ಉಪಾಯ ವಿಷಯದಲ್ಲಿ ಬರುವ ವಿರೋಧಗಳನ್ನೆಲ್ಲಾ "ಪಿಶಾಚಭಾಷಾಣಾಂ ಪಿಶಾಚ ಭಾಷಯೈವ ಉತ್ತರಂ ದೇಯಂ" ಎಂಬಂತೆ ಶಾಸ್ತ್ರರೀತ್ಯಾ ಆಕ್ಷೇಪಮಾಡಿದರೆ ಆರೀತಿಯಾಗಿಯೂ, ಯುಕ್ತಿಯಿಂದ ವಾದ ಮಾಡಿದವರಿಗೆ ಯುಕ್ತಿಯಿಂದಲೂ ಸಮಾಧಾನ ಮಾಡಿ ಉಪಾಯದ ಪ್ರಭಾವವನ್ನು ವ್ಯವಸ್ಥೆಮಾಡಿರುತ್ತಾರೆ. ಇಲ್ಲಿ ಸಿದ್ಧೋಪಾಯಭೂತನಾದ ಪರಮಾತ್ಮನೇ ಮುಕ್ತಿಕಾರಣ. ಪ್ರಪತ್ತಿಯು ವ್ಯಾಜಮಾತ್ರವೆಂದು ಪ್ರಮಾಣಗಳು ಹೇಳುತ್ತಿರುವುದರಿಂದ ಶರಣಾಗತಿಗೆ ಅನುಪಾಯತ್ವವು ಸಿದ್ಧವಾಗುವುದಿಲ್ಲವೇ. ತಾಯಿಯ ಸ್ತನ್ಯಪಾನಕ್ಕೆ ಯಾರಾದರೂ ಕೂಲಿಕೊಡುತ್ತಾರೆಯೇ? ತಾನಾಗಿಯೇ ರಕ್ಷಿಸುವುದಿಲ್ಲವೆ? ಇತ್ಯಾದಿ ವಚನಗಳ ಮೂಲಕವಾಗಿಯೂ ಯುಕ್ತಿಯಿಂದಲೂ ಬರುವ ವಾದಕ್ಕೆ ಸುಲಭವಾಗಿ ಸಮಾಧಾನವನ್ನು ಅನುಗ್ರಹಿಸಿರುತ್ತಾರೆ. ಆಚಾರ್ಯರು ಹಾಗೆಂದರೆ ವ್ಯಾಜ ಎಂದರೆ ಉಪಾಯತ್ವವಲ್ಲಾ ಎಂದು ಅರ್ಥಮಾಡಕೂಡದು. ಅತ್ಯಲ್ಪಕಾಲದಲ್ಲಿ ಅನುಷ್ಠಿಸುವುದಕ್ಕೆ. ಮಹತ್ತರವಾದ ಫಲಪ್ರಾಪ್ತಿಯು ಅತ್ಯಂತ ಸದೃಶವಾಗಲಾರದು. ಆದರೂ ಕಾರುಣ್ಯದಿಂದ ಇದನ್ನೇ ಅವಲಂಬಿಸಿ ಫಲದಾನ ಮಾಡುವುದರಿಂದ ವ್ಯಾಜವೆಂದು ವ್ಯವಹರಿಸುತ್ತಾರೆ. ಇದರಿಂದ ಉಪಾಯತ್ವಕ್ಕೆ ವ್ಯಾಹತಿ ಇಲ್ಲ. ತಾಯಿಯು ಕಾರುಣ್ಯದಿಂದ ಸ್ತನ್ಯಪಾನಮಾಡಿಸಿದರೂ. ಸ್ತನ್ಯವನ್ನು (ನುಂಗುವ) ವ್ಯಾಪಾರ ಮಗುವಿಗೆ ಸೇರುವಂತೆಯೇ ಚೇತನನ ಕಿಂಚಿತ್ಕಾರವೂ ಅತ್ಯಾವಶ್ಯಕವೆಂದು ಭಾವಿಸಬೇಕು.

ಸಿದ್ಧೋಪಾಯ ಮತ್ತು ಸಾಧ್ಯೋಪಾಯ ಇವೆರಡೂ ಮುಕ್ತಿಗೆ ಕಾರಣವಾದರೆ. ಸಿದ್ಧೋಪಾಯವೇ ಇದರಲ್ಲಿ ಪ್ರಧಾನವೆಂಬ ತಾತ್ಪರ್ಯದಿಂದ. ಅಪ್ರಧಾನಕ್ಕೆ ಹೇತುತ್ವವಿಲ್ಲವೆಂಬ ವಾದವು ಹೊರಟಿತು. ಹೀಗೆಯೇ ಅಂಗ ವಿಷಯದಲ್ಲೂ ವಿಶ್ವಾಸಮಾತ್ರವೇ ಪ್ರಪತ್ತಿ ಮುಂತಾದ ವಾಕ್ಯಗಳಿಗೂ ಕೂಡ ತತ್ತತ್ಪ್ರಧಾನ್ಯಾಭಿಪ್ರಾಯದಿಂದ ಅರ್ಥವರ್ಣನೆ ಮಾಡಬೇಕು. ಭಗವದ್ಜ್ಞಾನವುಳ್ಳವನು ಶೂದ್ರ ಜಾತಿಯವನಾದರೂ ಅವನು ಬ್ರಾಹ್ಮಣನೇ ಎಂದು ಹೇಳುವ ವಾಕ್ಯಗಳಿಗೆ ಜ್ಞಾನಪ್ರಾಧಾನ್ಯದಿಂದ ಪೂಜಾರ್ಹತೆ ಇರುವುದರಿಂದ ಇವನನ್ನು ಬ್ರಾಹ್ಮಣನೆಂದು ವ್ಯವಹರಿಸುತ್ತಾರೆ. ಇದರಿಂದ ಆಹಾರಾದಿಗಳಿಗೆ ಇದು ಅನ್ವಯಿಸುವುದಿಲ್ಲ. ಜನ್ಮಸಿದ್ಧವಾದ ಜಾತ್ಯಾದಿ ನಿಯಮ ಪರಿಪಾಲಿಸಬೇಕು. ಶಾಸ್ತ್ರಕ್ಕೆ ವಿರೋಧವಿಲ್ಲವಂತೆ ಜ್ಞಾನಿಯಾದ ಜಾತ್ಯಂತರದವನನ್ನೂ ಕೂಡ ಗೌರವಿಸಲೇಬೇಕು. ಈ ರೀತಿ ರಹಸ್ಯತ್ರಯಸಾರದ ಅರ್ಥಶಾಸನಭಾಗ ಮತ್ತು ಸ್ಥಿರೀಕರಣ ಭಾಗದಿಂದ ಸಕಲ ವಿಧವಾದ ವಿರೋಧವನ್ನೆಲ್ಲಾ ಪರಿಹರಿಸಿ, ಅರ್ಥಪಂಚಕವನ್ನು ವಿಶದವಾಗಿ ಅನುಗ್ರಹಿಸಿದ್ದರಿಂದ ರಹಸ್ಯತ್ರಯದ ಅರ್ಥಾನುಸಂಧಾನಕ್ಕೆ ಅಸ್ತಿಭಾರವನ್ನು ಹಾಕಿದಂತಾಯ್ತು.

ರಹಸ್ಯತ್ರಯ ಎಂದರೆ ಮೂಲಮಂತ್ರ. ದ್ವಯ, ಚರಮಶ್ಲೋಕ—ಮಂತ್ರಗಳಿಗೆಲ್ಲಾ ಮೂಲಭೂತ

ವಾಗಿ ಮಂತ್ರರಾಜ ಎಂದು ಪ್ರಸಿದ್ಧಿ ಹೊಂದಿ ಪ್ರಣವ, ನಮಶ್ಶಬ್ದ, ಚತುರ್ಥ್ಯಂತವಾದ ನಾರಾಯಣಾಯ ಎಂಬ 3 ಪದಗಳಿಂದ ಕೂಡಿದ ಮೂಲಮಂತ್ರವೇ ಪ್ರಧಾನವಾದದ್ದು. ಇದಕ್ಕೆ ವಿವರಣರೂಪವಾಗಿ ಇರುವ ಆರು ಪದಗಳಿಂದ ಕೂಡಿದ ಮಂತ್ರವೇ ದ್ವಯವು-ಇದಕ್ಕೂ ವಿವರಣರೂಪವಾಗಿ ಹನ್ನೆರಡು ಪದಗಳಿಂದ ಕೂಡಿದ್ದೇ ಚರಮಶ್ಲೋಕವು. ಇವು ಈ ವೈಚಿತ್ರ್ಯದಿಂದ ಕೂಡಿ ಅರ್ಥಪಂಚಕ, ತತ್ತ್ವತ್ರ-ಯಾದಿ ಸಕಲಾರ್ಥಗಳನ್ನೂ ಶಬ್ದತಃ ಆರ್ಥಿಕವಾಗಿಯೂ ಸಹ ಸೂಚಿಸುತ್ತವೆ. ಸಕಲ ವಾದಕ್ಕೂ ಮೂಲಭೂತವಾದದ್ದು ಪ್ರಣವ. ಇದಕ್ಕೆ ಮೂಲ ಆಕಾರ. ಈ ರೀತಿ ಸಕಲ ವಾಚಕಜಾತಕ್ಕೂ ಮೂಲವಾದ ಆಕಾರಕ್ಕೂ, ಸಕಲ ವಾಚ್ಯಾರ್ಥಗಳಿಗೂ ಕಾರಣಭೂತನಾದ ಪರಮಾತ್ಮನಿಗೂ ವಾಚ್ಯವಾಚಕಭಾವ ಸಂಬಂಧವಿರುವುದರಿಂದಲೂ, "ಅಕಾರೋವಿಷ್ಣು ವಾಚಕಃ" "ಅಕ್ಷರಾಣಾಂ ಅಕಾರೋಸ್ಮಿ" ಇತ್ಯಾದಿ ಪ್ರಮಾಣಗಳಿಂದಲೂ, ಅವ ರಕ್ಷಣೆ ಎಂಬ ಧಾತುವಿ-ನಿಂದ ಈ ಶಬ್ದವು ನಿಷ್ಪನ್ನವಾಗಿರುವುದರಿಂದಲೂ ಸರ್ವ ರಕ್ಷಕನಾದ ವಿಷ್ಣುವೇ ಆಕಾರಾರ್ಥ ಎಂದು ಸ್ವರಸವಾಗಿ ಬರುತ್ತದೆ. ಈ ವಿಷಯದಲ್ಲಿ "ಅ ಇತಿ ಭಗವತೋ ನಾರಾಯಣಸ್ಯ ಪ್ರಥಮಾಭಿಧಾನಮಭಿದಧತಾ ಕಿನ್ನಾಮ ಮಂಗಳಂ ನ ಕೃತಂ" ಎಂಬ ಅಭಿಯುಕ್ತ ವ್ಯವಹಾರವೂ ಅನುಕೂಲವಾಗಿದೆ. "ಮನ ಜ್ಞಾನೆ" ಎಂಬ ಧಾತುವಿಗೆ ಕೃತ್‌ಪ್ರತ್ಯಯ ಬಂದು ಮ್ ಎಂ-ಬುದಾಗಿ ಆಗಿದೆ. ಇದರಿಂದ ಜ್ಞಾನಸ್ವರೂಪನಾಗಿಯೂ ಜ್ಞಾನಾಶ್ರಯನಾಗಿಯೂ ಇರುವ ಅಹಮರ್ಥ ಆತ್ಮ ಸ್ವರೂಪವು ಸಿದ್ಧಿಸುತ್ತದೆ. ಉಕಾರಕ್ಕೆ ಅವಧಾರಣಾರ್ಥವು. ಮ್ ಜೀವವರ್ಗವು. ಆಯ ಏವ ಸರ್ವರಕ್ಷಕನಾದ ಶ್ರಿಯಃಪತಿಗೇನೆ. ತಾದರ್ಥ್ಯ ಚತುರ್ಥಿಯಿಂದ ಶೇಷಭೂತನು ಎಂದು ಅರ್ಥವಾಗುತ್ತದೆ. ಇದರಿಂದ ಈಶ್ವರನು ಶೇಷಿ, ಅಂದರೆ "ಉಭಯಾಧಿಷ್ಠಾನಂ ಏಕಂ ಶೇಷಿತ್ವಂ" ಎಂಬ ಸಿದ್ಧಾಂತರೀತ್ಯಾ ಶ್ರಿಯಃಪತಿಯಾದ ನಾರಾಯಣನಿಗೇನೆ ಜೀವಸ್ವರೂಪವು ಶೇಷಭೂತವಾದದ್ದು ಶ್ರೀಮನ್ನಾರಾಯಣ ಎಂದು ಉತ್ತರ ಮಂತ್ರದಿಂದಲೇ ಸ್ಪಷ್ಟ ಮತ್ತು ಯಥೇಷ್ಟವಿನಿಯೋಗಾರ್ಹತ್ವ ವಿರುವುದರಿಂದ ಈಶ್ವರನ ಇಚ್ಛೆಗನುಗುಣವಾಗಿ ಭಾಗವತ ಶೇಷಸಿದ್ಧವಾಗುತ್ತದೆ. ಏವ ಕಾರ-ತ್ವವೂ ಅನ್ಯಯೋಗವನ್ನು ವ್ಯವಚ್ಛೇದಿಸುವುದರಿಂದ ಭಗವದ್ಭಾಗವತ ವ್ಯತಿರಿಕ್ತ ಶೇಷತ್ವವನ್ನು ವ್ಯಾವರ್ತಿಸುತ್ತದೆ. ಆದರೆ ನಿತ್ಯನೈಮಿತ್ತಿಕ ಕರ್ಮಗಳಲ್ಲಿ ದೇವತಾಂತರ ಸಂಬಂಧವು ಬಾಧಕವಲ್ಲ. ಶಾಸ್ತ್ರದೃಷ್ಟ್ಯಾ ಶಿ ಎಲ್ಲಾ ಶಬ್ದಗಳೂ ಸಾಕ್ಷಾತ್ತಾಗಿ ಅಥವಾ ತದ್ದ್ವಾರಾ ಶ್ರೀಮನ್ನಾರಾಯಣನನ್ನೇ ಬೋಧಿಸುತ್ತವೆ. ಶೇಷಶೇಷಿ ಭಾವ ಹೇಳುವುದರಿಂದ ಜೀವ ಪರಮಾತ್ಮನಿಗೆ ಭೇದವು ಸ್ವರಸವಾಗಿ ಸಿದ್ಧಿಸುತ್ತದೆ. ಇಲ್ಲಿ ಉಪಾಧಿ ಹೇಳದೇ ಇರುವುದರಿಂದ ಭೇದ ಸ್ವಾಭಾವಿಕವೆಂದೇ ತಾತ್ಪರ್ಯ "ಯಸ್ಯಚೇತನಸ್ಯ ಯದ್ದ್ರವ್ಯಂ ಶೇಷತ್ವೈಕ ಸ್ವರೂಪಂ ಕತ್ತಸ್ಯ ಶರೀರಿ" ಎಂಬ ಲಕ್ಷಣಾನುಸಾರವಾಗಿ ನಿಯಮೇನ ಪರಮಾತ್ಮನಿಗೆ ಶೇಷಭೂತನಾದ ಜೀವನು ಶರೀರ. ಈಶ್ವರನು ತನ್ನ ರೂಪಿತ ಶರೀರಿ ಎಂದು ನಿರ್ಣಯವಾಗುವುದರಿಂದ ಶರೀರ ಶರೀರಿ ಭಾವ ರೂಪ ಸಂಬಂಧವೂ ಸಿದ್ಧವಾಗುತ್ತದೆ. ಶರೀರ ರಕ್ಷಣೆಯು ಶರೀರಿಗೇನೇ ಸೇರಿದ್ದು. ಆದ್ದರಿಂದಲೇ ಈಶ್ವರನು ಜೀವ ರಕ್ಷಣೆಗಾಗಿಯೇ ಉಪಾಯವನ್ನು ವೈಷಮ್ಯ ನೈರ್ಘೃಣ್ಯ ಪರಿಹಾರಾರ್ಥವಾಗಿ ಸಂಕಲ್ಪಿಸಿರುತ್ತಾನೆ. ಇದರಿಂದ ಫಲವೂ ಕೂಡ ಶರೀರಿಯಾದವನಿಗೇ ಎಂದು ಸಿದ್ಧವಾಗುತ್ತದೆ. ಆದರೆ ಜೀವನಿಗೆ ಫಲವಿಲ್ಲಾ ಎಂದು ಹೇಳಬಾರದು. "ಭುಂಕ್ತೇ ಸ್ವಭೋಗಮಖಿಲಂ ಪತಿಭೋಗಶೇಷಂ" ಪತಿಯ ಭೋಗವೇ ಪ್ರಧಾನವನ್ನಾಗಿ ಭಾವಿಸಿರುವ ಪತಿವ್ರತೆಗೆ, ತಚ್ಛೇಷ ಭೂತವಾಗಿ ಸ್ವಭೋಗ ಬರುವಂತೆ ಆನುಷಂಗಿಕವಾಗಿ ಜೀವನಿಗೂ ಭೋಗವಿದ್ದೇ ಇದೆ. ಆದರೆ ಇವನ ಉದ್ದೇಶ ಸ್ವಾಮಿಯ ಭೋಗದಲ್ಲೇ ಇರಬೇಕು. ಈ ಉಪಾಯವನ್ನೆ ನಮಶ್ಶಬ್ದವು ಪ್ರತಿಪಾದಿಸುತ್ತದೆ. ಮಃ ನನಗೆ. ನ ಸ್ವಾತಂ-ತ್ರ್ಯವಿಲ್ಲ ಮತ್ತು ಪತ್ನಿಪುತ್ರಾದಿಗಳ ಶೇಷತ್ವವೂ ಇಲ್ಲಾ ಇತ್ಯಾದ್ಯನೇಕಾರ್ಥಗಳಿದ್ದರೂ ಪ್ರಕೃತಾರ್ಥಕ್ಕನುಗುಣವಾಗಿ ನಮಶ್ಶಬ್ದವು ಶರಣಾಗತಿಯನ್ನು ಹೇಳುತ್ತದೆ. ನಮಶ್ಶಬ್ದವು "ದ್ರೌಪದ್ಯಾ ಸಹಿತಾಸ್ಸರ್ವೇ

ನಮಶ್ಶಕ್ರುಃ ಜನಾರ್ದನಂ" ಇತ್ಯಾದಿ ಪ್ರಯೋಗಾನುಸಾರವಾಗಿ "ನಮಶ್ಶಬ್ದಃ ಪ್ರಧಾನಾರ್ಥಃ ಸ್ವಾಹಾ ಶಬ್ದ ಇವೇಷ್ಯತೆ" ಇತ್ಯಾದಿ ವಚನಗಳಿಂದಲೂ ಭರ ಸಮರ್ಪಣ ಪರವು.

"ನಾರಾಯಣಾಯ ಸ್ವಾಂ" ಇದರಿಂದ ಉಪಾಯದ ಫಲ ಸ್ವರೂಪವು ಪ್ರತಿಪಾದಿಸಲ್ಪಡುತ್ತದೆ. "ರೀಙ್ಕ್ಷಯೇ" ಎಂಬ ಧಾತುವಿನಿಂದ ನಿಷ್ಪನ್ನವಾದ್ದರಿಂದ ನರ ಎಂದರೆ ಸ್ವರೂಪತಃ ಸ್ವಭಾವತಶ್ಚ ಸಂಕೋಚ ವಿಕಾಸಾತ್ಮಕ ಅವಸ್ಥಾರಹಿತನಾದ ಪರಮಾತ್ಮ-ತಸ್ಯ ಸಂಬಂಧಿನೋ ನಾರಾ:— ಚೇತನಾಚೇತನಾತ್ಮಕ ಸರ್ವ ಪದಾರ್ಥಗಳು ತೇಷಾಂ ಅಯನಂ. ನಾರಾಯಣಃ ಛಾಂದಸ ಪ್ರಕ್ರಿಯೆಯಿಂದ ಲಿಂಗ ವ್ಯತ್ಯಾಸವಾಗಿದೆ. ಅಯನ ಶಬ್ದದಲ್ಲೂ ಕೂಡ ಕರಣ, ಕರ್ಮ, ಅಧಿಕರಣಾರ್ಥದಲ್ಲಿ ಪ್ರತ್ಯಯ ಬಂದಿರುವುದರಿಂದ. ಉಪಾಯತ್ವ, ಉಪೇಯತ್ವ ಆಧಾರತ್ವವು ಸಿದ್ಧವಾಗುತ್ತದೆ. ಹೀಗೆಯೇ ನಾರಾಃ ಅಯನಂ ವ್ಯಾಪ್ಯಂ ಯಸ್ಯೇತಿ ಬಹುವ್ರೀಹಿಸಮಾಸದಿಂದ ಸರ್ವ ವ್ಯಾಪಕತ್ವ ಸರ್ವಾಂತರ್ಯಾಮಿತ್ವವೂ ಕೂಡ ಪ್ರತಿಪಾದಿಸಲ್ಪಡುತ್ತದೆ. ಇದರಿಂದ ಜೀವನಿಂದ ಮಾಡಲ್ಪಡುವ ಕೈಂಕರ್ಯದಫಲ ಅಂತರ್ಯಾಮಿಗೇ ಸೇರುತ್ತದೆ ಎಂಬ ವಿಷಯ ಸೂಚಿತವಾಗುತ್ತದೆ. ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಕೈಂಕರ್ಯಾಯ ಅಹಂಸ್ಯಾಂ" ಎಂಬುದಾಗಿ ಕೈಂಕರ್ಯವು ಪ್ರಾರ್ಥಿಸಲ್ಪಡುವುದರಿಂದ ಇದೇ ಪುರುಷಾರ್ಥ. ಹೀಗೆ ತತ್ತ್ವ, ಹಿತ, ಪುರುಷಾರ್ಥವನ್ನು ತಿಳಿಯಬಹುದು. ಅಕಾರ ವಾಚ್ಯನಾದ ಶ್ರೀಮನ್ನಾರಾಯಣನಿಗೇನೇ ನಾನು ಶೇಷಭೂತನು, ನಮಃ ನನಗೆ ನಾನು ಶೇಷಭೂತನಲ್ಲಾ. ಈ ರೀತಿ ಯೋಜನೆಯಿಂದ ಈ ಮಂತ್ರವು ಸ್ವರೂಪಪರವು ಅಥವಾ ಪ್ರಣವದಿಂದ ಸ್ವರೂಪ, ನಮಶ್ಶಬ್ದದಿಂದ ಉಪಾಯ. ನಾರಾಯಣಾಯ ಎಂಬುವುದರಿಂದ ಪುರುಷಾರ್ಥ ಪರವಾಗಿಯೂ ಯೋಜನೆ ಮಾಡಿದರೆ ಇದರಿಂದ ಕ್ರಮವಾಗಿ ತತ್ತ್ವ, ಹಿತ, ಪುರುಷಾರ್ಥ ರೂಪವಾದ ತತ್ತ್ವತ್ರಯದ ವಿವೇಕವು ಬರುತ್ತದೆ.

## ದ್ವಯ

ಮೂಲ ಮಂತ್ರದಲ್ಲಿ ಸಂಕ್ಷೇಪವಾಗಿ ಪ್ರತಿಪಾದಿತವಾದ ಉಪಾಯವನ್ನೇ ಅನುಷ್ಠಾನ ರೂಪದಲ್ಲಿ ಪ್ರಕಾಶಪಡಿಸಿ ವಿವರಿಸುವದು ದ್ವಯಮಂತ್ರವ— ಪರಮಾತ್ಮನಲ್ಲಿರುವ ಉಪಾಯತ್ವ, ಉಪೇಯತ್ವ ಇವೆರಡನ್ನೂ ಪ್ರಕಾಶಪಡಿಸುವುದರಿಂದ ದ್ವಯ ಎಂದು ಅನ್ವರ್ಥವಾಯ್ತು— ಈ ಎರಡು ಅವಸ್ಥೆಗಳಲ್ಲಿಯೂ, ಲಕ್ಷ್ಮೀ ಸಂಬಂಧವು ನಿತ್ಯವಾಗಿಯೇ ಇದೆ ಎಂದು ಪೂರ್ವೋತ್ತರ ಖಂಡದಲ್ಲೂ "ಶ್ರೀಮತ್" ಎಂಬ ಪದದಿಂದ ಇದು ವೇದ್ಯವಾಗುತ್ತದೆ. ಇದರಿಂದ ಲಕ್ಷ್ಮಿಗೆ ಪುರುಷಾಕಾರತ್ವ ಮತ್ತು ಉಪೇಯತ್ವ ಮಾತ್ರ ಇದೆ. ಉಪಾಯತ್ವ ಇಲ್ಲ ಎಂಬ ವಾದಕ್ಕೆ ಅವಕಾಶವಿಲ್ಲ. ಈಗ "ಚರಣೌ" ಎಂಬ ದ್ವಿವಚನ ಸರಿಯಾಗುವುದಿಲ್ಲ, "ಚರಣಾ" ಎಂದಿರಬೇಕು ಎಂಬ ಸಂಶಯ ಬರಬಹುದು. ಆದರೆ "ಶ್ರೀ ವಿಶಿಷ್ಟ ನಾರಾಯಣ" ಎಂಬ ಕಡೆ ವಿಶೇಷ್ಯವೇ ಪ್ರಧಾನವಾದ್ದರಿಂದ, ಇದರ ವಿವಕ್ಷೆಯಿಂದ ದ್ವಿವಚನವೇ ಸಂಗತವಾಗಿದೆ.

ಚರಣವನ್ನು ಆಶ್ರಯಿಸುವುದರ ಉದ್ದೇಶವೇನೆಂದರೆ ಭೃತ್ಯನಾದವನು ತನ್ನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿ ರಾಜನ ಚರಣವನ್ನೇ ಹಿಡಿಯುವುದಿಲ್ಲವೆ? ಅವನ ಕೈಯನ್ನು ಹಿಡಿಯುತ್ತಾನೆಯೇ? ಈ ಅನುಭವವನ್ನು ವಿಮರ್ಶಿಸಿ, "ಅನತಿಕ್ರಮಣೀಯಂ ಹಿ ಚರಣಗ್ರಹಣಂ" ಎಂಬಂತೆ ಚರಣಗ್ರಹಣ ಮಾಡಿದವನನ್ನು ತಿರಸ್ಕರಿಸಲು ಅಸಾಧ್ಯವೆಂದೇ ಭಾವಿಸಿ ಚರಣ ಮೂಲಕವಾಗಿ ಶ್ರೀಮನ್ನಾರಾಯಣನನ್ನೇ ಆಶ ಯಿಸುವುದು. ನರ ಸಂಬಂಧಿನೋ ನಾರಾಃ ಎಂಬ ವ್ಯುತ್ಪತ್ತಿಯಿಂದ ರಕ್ಷಣಕ್ಕೆ ಉಪಯುಕ್ತವಾದ "ಸೌಲಭ್ಯ ಸೌಶೀಲ್ಯ, ವಾತ್ಸಲ್ಯಾದಿ" ಗುಣಗಳು ವಿವಕ್ಷಿತ. ಇವುಗಳಿಗೆಲ್ಲಾ ಅಯನಂ ಆಧಾರಭೂತನಾದವನು. ಪ್ರಪದ್ಯೆ ಎಂಬ ಉತ್ತಮ ಪುರುಷದಿಂದ ಅಹಂ ಎಂದು ಅರ್ಥ ಬರುತ್ತದೆ. ಶರಣಂ ಎಂದರೆ ಉಪಾಯ, ಪ್ರ ಪೂರ್ವಕವಾದ ಪದ ಧಾತುವಿಗೆ ಜ್ಞಾನಾರ್ಥಕವಿರುವುದರಿಂದ ಪ್ರಕೃಷ್ಟವಾದ ಜ್ಞಾನವೆಂದರೆ, ಅಧ್ಯವಸಾಯ ಎಂದು ಅರ್ಥವಾಗಿ ಮಹಾವಿಶ್ವಾಸದಲ್ಲಿ ಪರ್ಯವಸಾನವಾಗುತ್ತದೆ.

ದೂ ಸಹ ಭರನ್ಯಾಸಪರ್ಯಂತವಾಗಿಯೇ ಅಭಿಪ್ರೇತವು. ಪ್ರಧಾನವಾದ ವಿಶ್ವಾಸವನ್ನು ವಾಚ್ಯವಾಗಿ ಹೇಳಿದ್ದರಿಂದ ಉಳಿದ ಅಂಗಗಳೆಲ್ಲಾ ವಿವಕ್ಷಿತವು— ಉತ್ತಮ ಪುರುಷದಿಂದ ಆಕಿಂಚಿನ್ಯಾದಿಗಳು ಸೂಚಿಸಲ್ಪಡುತ್ತವೆ. ಉತ್ತರಾರ್ಥದಲ್ಲಿ ನಾರಾಯಣ ಶಬ್ದದಿಂದ ಪ್ರಾಪ್ಯತ್ವಕ್ಕೆ ಅನುಗುಣವಾದ ದಿವ್ಯರೂಪ, ವಿಭೂತಿದ್ವಯ, ಗುಣಾದಿಗಳು ವಿವಕ್ಷಿತವು. "ಶ್ರೀಮತೇ ನಾರಾಯಣಾಯ ಸ್ಯಾಂ" ಎಂದು ಅನ್ವಯಮಾಡಿ ಕೈಂಕರ್ಯ ರೂಪವಾದ ಪುರುಷಾರ್ಥವೇ ಪ್ರಾರ್ಥನೀಯವಾಗುತ್ತದೆ ವಿಭೂತಿ ದ್ವಯವಿಶಿಷ್ಟ ಬ್ರಹ್ಮಾನುಭವವೇ ಪುರುಷಾರ್ಥವಾಗಿರುವಾಗ ಕೈಂಕರ್ಯಕ್ಕೆ ಅವಕಾಶ ಹೇಗೆ ಎಂದರೆ ಬ್ರಹ್ಮಾನುಭವದ ಪರೀವಾಹರೂಪವಾಗಿಯೇ ಕೈಂಕರ್ಯವು ಪ್ರಾಪ್ತವಾಗುತ್ತದೆ.

ನಮಃ:- 'ಮಮ ಕಿಂಚಿತ್ ನ ಸ್ಯಾತ್' ಇದರಿಂದ ಫಲ ದಶೆಯಲ್ಲಿ ಸ್ವಾಧೀನ ಕರ್ತೃತ್ವ, ಸ್ವಾರ್ಥಕರ್ತೃತ್ವ ಸ್ವಾಧೀನ ಭೋಕ್ತೃತ್ವ, ಸ್ವಾರ್ಥ ಭೋಕ್ತೃತ್ವ ರೂಪವಾದ ವಿರೋಧಿ ಚತುಷ್ಟಯವು ನಿಷೇಧಿಸಲ್ಪಡುತ್ತದೆ. ನಿರವಧಿಕ ಐಶ್ವರ್ಯ ವಿಶಿಷ್ಟ ಶ್ರಿಯಃಪತಿಯ ಅನುಭವ ಪುರಸ್ಸರವಾದ ನಿರಪರಾಧ ಕೈಂಕರ್ಯ ಪ್ರಾಪ್ತಿಗಾಗಿ, ಶ್ರೀಮನ್ನಾರಾಯಣ ಚರಣಾರವಿಂದಗಳೇ ಉಪಾಯವೆಂಬ ಅಧ್ಯವಸಾಯದಿಂದ, ಪ್ರಾರ್ಥನಾಪೂರ್ವಕ ಆತ್ಮರಕ್ಷಾಭರವನ್ನು ಸಮರ್ಪಿಸುತ್ತೇನೆ-ಎಂದು ಸಮುದಾಯಾರ್ಥವು.

## ಚರಮಶ್ಲೋಕ

ಶರಣಾಗತಿ ಮಂತ್ರದ ವಿವರಣ ರೂಪವಾಗಿ ಅಪೇಕ್ಷಿತವಾದ ಅಧಿಕಾರನೈರಪೇಕ್ಷ್ಯಾದ್ಯರ್ಥವನ್ನು ವಿಶದಪಡಿಸುವುದರ ಮೂಲ್ಕ ಉಪಾಯ ವಿಧಾಯಕವಾದ ವಾಕ್ಯವೇ ಸಾಕ್ಷಾದ್ಭಗವಂತನ ಮುಖಾರವಿಂದದಿಂದ ಆವಿರ್ಭವಿಸಿದೆ. ಸರ್ವಧರ್ಮಾ ಎಂದರೆ ಮೋಕ್ಷೋಪಾಯತ್ವೇನ ವಿಹಿತವಾದ ಭಕ್ತಿಯೋಗ, ಬಹುವಚನದಿಂದ ಸದ್ವಿದ್ಯಾದಿ ವಿದ್ಯೆಗಳಲ್ಲಿ ಜ್ಞಾನಶಕ್ತ್ಯಾದಿಗಳು ಇಲ್ಲದಿರುವುದರಿಂದ ಅವುಗಳನ್ನೆಲ್ಲಾ ತ್ಯಾಗಮಾಡಿರುವವನೇ ಈ ಪ್ರಪತ್ತಿಗೆ ಅಧಿಕಾರಿ ಎಂದು "ಸರ್ವಧರ್ಮಾ ಪರಿತ್ಯಜ್ಯ" ವರ್ತಮಾನಃ ತ್ವಂ ಎಂಬ ಭಾಗದಿಂದ ಸೂಚಿತವಾಗುತ್ತದೆ. "ಮಾಂ"– ಸರ್ವಶಕ್ತಿ, ಪರಮಕಾರುಣಿಕನಾದ, ನನ್ನನ್ನು, ಏಕಂ- ಪ್ರಧಾನವನ್ನಾಗಿ "ಶರಣಂವ್ರಜ" ಉಪಾಯತ್ವೇನ ಅಧ್ಯವಸಾಯ ಪೂರ್ವಕ ಭರಸಮರ್ಪಣ ನನ್ನಲ್ಲಿ ಮಾಡು. ಭಕ್ತಿಯೋಗಾಧಿಕಾರಿಯು ಅಂಗ ಪ್ರಪತ್ತಿಯನ್ನಾ ಮಾಡಿ ಆಪ್ರಯಾಣಂ ಭಕ್ತಿ ಮಾಡಿದರೆ ನಾನು ಪ್ರಸನ್ನನಾಗಿ ಮುಕ್ತಿಯನ್ನು ಕೊಡುತ್ತೇನೆ. ಇದಕ್ಕೆ ಅಧಿಕಾರಿಯಾಗದಿರುವ ನೀನು ಸ್ವತಂತ್ರ ಪ್ರಪತ್ತಿಯನ್ನೇ ತಾನಾಗಿಯೇ ಅಥವಾ ಆಚಾರ್ಯ ಮೂಲಕವಾಗಿ ಆಚರಿಸಿದ್ದೇ ಆದರೆ ಭಕ್ತಿಯೋಗದಿಂದ ಹೊಂದಲ್ಪಡುವ ಫಲವನ್ನು ನಾನೇ ಆ ಸ್ಥಾನದಲ್ಲಿ ನಿಂತು ಅಂದರೆ ಆ ಭರವನ್ನು ನಾನೇ ಸ್ವೀಕರಿಸಿ, ನಿನ್ನ ಅಪೇಕ್ಷೆಗೆ ಅನುಗುಣವಾದ ಸಮಯದಲ್ಲಿ ರಕ್ಷಿಸುವೆನು. ಈ ವಿಷಯದಲ್ಲಿ ಯಾವ ಶೋಕವನ್ನಾ ಮಾಡಬೇಡ. ಮುಕ್ತಿವಿಷಯದಲ್ಲಿ ನಿಸ್ಸಂಶಯದಿಂದ ಸುಖವಾಗಿ ಇರು. ಸಾಂಸಾರಿಕ ಶೋಕವನ್ನು ಇಲ್ಲಿ ನಿವರ್ತಿಸುವುದಿಲ್ಲ. ಇದು ಕರ್ಮಾನುರೋಧೇನ ಅನುಭಾವ್ಯವೇ ಸರಿ. ಮುಕ್ತಿಗೆ ಸಾಧನಭೂತವಾದದು ಭಕ್ತಿಯೋಗ. ಇದಕ್ಕೆ ಸಾಧನವಾದದ್ದು ಕರ್ಮಯೋಗ ಜ್ಞಾನಯೋಗಾದಿಗಳು. ಇವುಗಳನ್ನೆಲ್ಲಾ ಅನುಷ್ಠಾನ ಮಾಡಲು ಶಕ್ತಿಯಿಲ್ಲ- ಈ ಸಂದರ್ಭದಲ್ಲಿ ನನಗೆ ಮುಕ್ತಿಲಾಭವು ಸ್ವಪ್ನಕಲ್ಪವೇ ಆಗುತ್ತೆ ಎಂಬ ಪ್ರಕರಣಸಿದ್ಧವಾದ ಶೋಕವೇ ಇಲ್ಲಿ ವಿವಕ್ಷಿತ. ಪೂರ್ವಾರ್ಥದಲ್ಲಿ ಜೀವನ ಕರ್ತವ್ಯವೂ, ಉತ್ತರಾರ್ಥದಲ್ಲಿ ಪರಮಾತ್ಮನ ಕರ್ತವ್ಯವೂ ಸಹ ಪ್ರತಿಪಾದಿಸಲ್ಪಟ್ಟಿದೆ.

ಅಲ್ಪಕಾಲ ಸಾಧ್ಯವಾದ ಈ ಪ್ರಪತ್ತಿಗೆ ವಾಚಾಂ ಆಗೋಚರವಾದ ನಿರತಿಶಯ ಮುಕ್ತ್ಯೈಶ್ವರ್ಯಪ್ರಾಪ್ತಿ ಸಾಧ್ಯವೇ ಎಂಬ ಸಂಶಯವನ್ನು "ಅಹಂ ಮೋಕ್ಷಯಿಷ್ಯಾಮಿ" ಎಂಬುವುದರಿಂದ ಹೋಗಲಾಡಿಸುತ್ತಾನೆ. ಅಶಕ್ತನಾದವನಿಗೆ ಪರಮದಯಾಳುವಾದ ಶ್ರಿಯಃಪತಿಯು ತನ್ನ ಆಜ್ಞೆಯನ್ನು ಪರಿಪಾಲಿಸಿರುವುದರಿಂದ ಪ್ರಸನ್ನನಾಗುವ ಸ್ವಭಾವವುಳ್ಳವನು ಎಂದು "ಅಹಂ" ಎಂಬ ಪದದ ತಾತ್ಪರ್ಯವು. ಈ ಅಭಿಪ್ರಾಯದಿಂದಲೆ

'ವ್ಯಾಜಮಾತ್ರಾವಲಂಬೀ' ಎಂದು ಪ್ರಸಿದ್ಧವಾಗಿದೆ. ಪ್ರಧಾನ ಉಪಾಯಭೂತನಾದವನೇ ನಾನು. ಪ್ರಪತ್ತಿಯು ವ್ಯಾಜಮಾತ್ರವು—ಅಪ್ರಧಾನವು. ನನ್ನನ್ನೇ ಆಶ್ರಯಿಸು. ಮುಕ್ತಿಪ್ರತಿಬಂಧಕವಾದ ಸರ್ವಪಾಪಗಳನ್ನೂ ಹೋಗಲಾಡಿಸುತ್ತೇನೆ ಎಂಬ ಸತ್ಯಸಂಕಲ್ಪನ ಪ್ರತಿಜ್ಞೆಯಿಂದ, ನಾವೂ ಸಹ ನಿರ್ಭಯರಾಗಿ ಇರಬೇಕು. ಇದರಿಂದ ಅರ್ಥಪಂಚಕದಲ್ಲಿ ಘಟಕವಾದ ಪ್ರಾಪ್ತಿವಿರೋಧಿಗಳನ್ನು ಸ್ಪಷ್ಟಪಡಿಸಿದ್ದಾರೆ. ಹೀಗೆಯೇ ಈ ಮೂರು ರಹಸ್ಯಗಳಲ್ಲೂ ಅರ್ಥಪಂಚಕ ತತ್ತ್ವತ್ರಯಾದಿಗಳು ಸೂಚಿಸಲ್ಪಟ್ಟಿವೆ. ಪರಮಾತ್ಮನ ಸ್ವಭಾವವನ್ನು ಚೆನ್ನಾಗಿ ಅರಿತು, ಈ ಶರಣಾಗತಿಯನ್ನು ಆಚರಿಸಿದವರಿಗೆ ಯಾವ ಸಂಶಯಕ್ಕೂ ಅವಕಾಶವಿರುವುದಿಲ್ಲ.

ನಿಗಮನ

ಶ್ರೀ ಮದಾಚಾರ್ಯರು ರಾಜಕುಮಾರ ನ್ಯಾಯವನ್ನೇ ಉಪಕ್ರಮದಲ್ಲಿ ಪ್ರದರ್ಶಿಸಿ ಉಪಸಂಹಾರದಲ್ಲೂ ಸಹ ಮುಕ್ತಿಗೆ ರಾಜಮಾರ್ಗವನ್ನೇ ಸ್ಥಾಪಿಸಿ ರಾಜಕುಮಾರ ಪ್ರಾಯರಾದ ಜೀವರಿಗೂ, ರಾಜಾಧಿರಾಜನಾದ ಶ್ರಿಯಃಪತಿಗೂ ಸಹ ಇರುವ ಸ್ವರೂಪಾನುಗುಣವಾದ ವ್ಯಾಪಾರವನ್ನು ಲೋಕಾನುಭವಕ್ಕೂ ಸಕಲಶ್ರುತ್ಯಾದಿ ಪ್ರಮಾಣಗಳಿಗೂ, ಸದಾಚಾರ್ಯ ಸಂಪ್ರದಾಯಕ್ಕೂ ವಿರೋಧವಿಲ್ಲದಂತೆ ವಿಶದಪಡಿಸಿ ಮಹೋಪಕಾರ ಮಾಡಿದ್ದಾರೆ. ಈ ರೀತಿ ಇಹಪರಗಳಲ್ಲಿ ಸೌಖ್ಯವನ್ನು ಹೊಂದಲು ಅಪೇಕ್ಷೆಯುಳ್ಳವರಿಗೆ

"ಉಪಯುಕ್ತೇಷು ವೈಶದ್ಯಂ ತ್ರಿವರ್ಗನಿರಪೇಕ್ಷತಾ ।
ಕರಣತ್ರಯ ಸಾರೂಪ್ಯಂ ಇತಿ ಸೌಖ್ಯರಸಾಯನಂ ॥

ಎಂಬ ಸೂಕ್ತ್ಯನುಸಾರವಾಗಿ, ಸಕಲ ಉಪಯುಕ್ತಾಂಶಗಳನ್ನು ಬೋಧಿಸುವ ಈ ರಹಸ್ಯತ್ರಯ ಗ್ರಂಥವು ಅತ್ಯಂತಾದರಣೀಯವಾಗಿದೆ. ನಾವು ಕೇವಲ ವೇಷಧಾರಿಗಳಾದರೆ ಸರ್ವಜ್ಞನಾದ ಪರಮ ಪುರುಷನೂ ಕೂಡ ಇದಕ್ಕನುಗುಣವಾಗಿಯೇ ನಾನಾ ವೇಷಗಳನ್ನು ತೋರಿಸಬಹುದು. ರಹಸ್ಯಾರ್ಥವನ್ನು ಅರಿತು ಇತರರಿಗೆ ಖ್ಯಾತಿ, ಲಾಭ, ಪೂಜಾರ್ಥವಾಗಿ ಬೋಧಿಸುತ್ತಾ ಸ್ವಾನುಷ್ಠಾನವಿಲ್ಲದಿದ್ದವರನ್ನು ಕುರಿತು ಈ ರೀತಿ ಆಚಾರ್ಯರು ಹೇಳಿರುತ್ತಾರೆ.

ಪಂಡಿತೈರರ್ಥಕಾರ್ಪಣ್ಯಾತ್ ಪಣ್ಯಸ್ತ್ರೀಭಿರಿವ
ಸ್ವಯಂ ।
ಆತ್ಮಾ ಸಂಸ್ಕೃತ್ಯ ಸಂಸ್ಕೃತ್ಯ
ಪರೋಪಕರಣೀಕೃತಃ ॥

ವೇಶ್ಯಾಸ್ತ್ರೀಯಂತೆ ಅರ್ಥಾರ್ಜನೆದೃಷ್ಟಿಯಿಂದ, ಪಂಡಿತನಾದವನು ತಾನು ಜ್ಞಾನಪೂರ್ಣತೆಯಿಂದ ಅಲಂಕೃತನಾಗಿ ಇತರರಿಗೆ ಉತಕರಣವಾಗಿ ಆಗುತ್ತಾನೆ ಆದ್ದರಿಂದ ಅನುಷ್ಠಾನ ಪರನಾಗಿ ಧರ್ಮಾರ್ಥ ಕಾಮಗಳಲ್ಲಿ ನಿರಪೇಕ್ಷನಾಗಿಯೂ, ಕರಣತ್ರಯ ಶುದ್ಧಿಯುಳ್ಳವನಾಗಿಯೂ ಇರುವವನಿಗೆ ಜೀವನದಲ್ಲಿ ಸೌಖ್ಯ ಸುಲಭ—ಎಂಬುವ ವಿಷಯ ಅನುಭವಸಿದ್ಧವಾಗಿದೆ. ಮುಕ್ತಿ ಎಂಬ ಅದೃಷ್ಟ ಫಲ ಶ್ರಿಯಃಪತಿಯ ಅನುಗ್ರಹದಿಂದ ಲಭಿಸುತ್ತದೆ. ಈ ವಿಷಯದಲ್ಲಿ ದೃಢವಾದ ವಿಶ್ವಾಸವಿರಬೇಕು.

ಎಲ್ಲರೂ ಆನಂದದಿಂದ ಬಾಳಲಿ ಎಂಬ ಪರಮದಯೆಯಿಂದಲೇ ಈ ಗ್ರಂಥರತ್ನವನ್ನು ಶ್ರೀ ಮದಾಚಾರ್ಯರು ಪ್ರಚಾರಮಾಡಿದರು. ಈ ವಿಧವಾದ ನಿಧಿಯಿದ್ದರೂ ಎಲ್ಲರೂ ಜ್ಞಾನ ದರಿದ್ರರೇ ಆಗಿರುತ್ತಾರಲ್ಲಾ ಏನು ಕಾರಣ ಎಂದರೆ ಮೇಲೆ ಹೇಳಿದಂತೆ ಆನಂದ ಸ್ವರೂಪನಾದ ಹಿರಣ್ಯನಿಧಿ ಸದೃಶನಾದ ಪರಮಾತ್ಮನು "ಈಶ್ವರಃ ಸರ್ವಭೂತಾನಾಂ ಹೃದ್ದೇಶೇऽರ್ಜುನತಿಷ್ಠತಿ। ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ" ಎಂಬ ಗೀತಾವಚನದಂತೆ ಪ್ರತಿ ಒಬ್ಬರ ಹೃದಯ ಪುಂಡರೀಕದಲ್ಲೇ ಇದ್ದರೂ. ಆ ನಿಧಿಯನ್ನು ಹೊಂದುವ ದಾರ್ಗವನ್ನು ತಿಳಿಯದಿರುವುದೇ ಮುಖ್ಯವಾದ ಕಾರಣ ಈ ನಿಧಿಯನ್ನು ಹೊಂದಲು ದುಶ್ಶಕ್ಯವಾದ ಉಪಾಯವನ್ನು ಈಗಿನ ಕಾಲದವರಿಗೆ ಅಂದರೆ ಜ್ಞಾನಶಕ್ತ್ಯಾದಿ ರಹಿತರಾದವರಿಗೆ ಆಚರಿಸಲು ಅಸಾಧ್ಯವೆಂದು, ಸುಲಭವಾದ ಮಾರ್ಗವನ್ನು ತೋರಿಸಿಕೊಟ್ಟರೂ ಕೂಡ, ಇದರಲ್ಲೂ ಆಭಿಮುಖ್ಯ ವಿಲ್ಲದಿದ್ದರೆ ಪ್ರಬಲವಾದ ದುರದೃಷ್ಟವೇ ಪ್ರತಿಬಂಧಕವೆಂದು

ಊಹಿಸಬೇಕಾಗಿದೆ ಇದನ್ನೇ ಶ್ರೀ ಮದಾಚಾರ್ಯರು ನಿಗಮನದಲ್ಲಿ 'ಸಂಕೇತಭೀತಿರಹಿತಃ ಸತ್ಯನೇಷ್ವಸಕ್ತಃ' ಇತ್ಯಾದಿ ಗುಣಗಳುಳ್ಳವನಿಗೇನೆ ಈ ರತ್ನ ಪ್ರಾಪ್ತಿಯೋಗವಿದೆ ಎಂದು ಗ್ರಹಿಸಿ, ಸಂಕೇತ ಪಿಶಾಚಗ್ರಸ್ತರಿಗೆ ಈ ಯೋಗವಿಲ್ಲವೆಂದು ಸ್ಪಷ್ಟಪಡಿಸಿದ್ದಾರೆ. ಇದು ಅಕ್ಷರಶಃ ಸತ್ಯವಾಗಿದೆ. ಈಗ ನಮ್ಮ ಅಚರಣೆಯು ಕೇವಲ ಸಂಕೇತಮಯವಾಗಿಯೇ ಇದೆ ಆದ್ದರಿಂದ ಇದನ್ನು ತ್ಯಜಿಸಿ ಯೋಗ್ಯರಾದ ಜ್ಞಾನಿಗಳಲ್ಲೇ ಈ ರಹಸ್ಯತ್ರಯವನ್ನು ಅಧಿಕರಿಸಿ, ಅಲ್ಪ ಪ್ರಯೋಜನದಲ್ಲಿ ವಿಮುಖನಾಗಿ, ಶಕ್ತ್ಯನುಸಾರ ಅನುಷ್ಠಾನ ಪರನಾಗಿದ್ದು ಭಗವಚ್ಚಿಂತನಪರನಾಗಿದ್ದರೆ ಇಹಪರ ಸೌಖ್ಯವನ್ನು ಹೊಂದಬಹುದು. ನಾನಾ ಭಾಷಾಂತರದಿಂದ ಪರಿವರ್ತಿಸಲ್ಪಟ್ಟ ರಹಸ್ಯತ್ರಯವನ್ನು ಸ್ವತಃ ಓದಿ ಜ್ಞಾನ ಸಂಪಾದಿಸಲು ಅನುಕೂಲವಿರುವ ಈಗಿನ ಕಾಲದಲ್ಲಿ ಗುರುಮುಖಾಧ್ಯಯನ ನಿಯಮ, ಕೇವಲ ಸಂಕೇತಬದ್ಧವೆಂದು ಕೆಲವರು ವಾದಿಸಬಹುದು. ಆದರೆ ಮೂಲಗ್ರಂಥವನ್ನೇ ಅಧ್ಯಯನಮಾಡಿದವರಿಗೂ ಈ ರೀತಿ ಜ್ಞಾನಾರ್ಜನೆ ಮಾಡಿರುವವರಿಗೂ ಸಹ ಜ್ಞಾನ ತಾರತಮ್ಯ ಸ್ಪಷ್ಟವಾಗಿಯೇ ಗೊತ್ತಾಗುತ್ತದೆ. ಇದನ್ನೇ ಶಾಸ್ತ್ರಗಳಲ್ಲಿ "ಜಾರಗರ್ಭಇವಸ್ತ್ರಿಯಃ" ಎಂದು ಹೇಳಿದ್ದು. ಜಾರಪುರುಷನಿಂದ ಗರ್ಭ ಹೊಂದಿದವಳು ಸಮಾಜಕ್ಕೆ ಅಂಜುವಂತೆ ಇಂತಹವರೂ ಹೆದರಬೇಕಾಗುತ್ತದೆ. ಮತ್ತು ಉಪಕ್ರಮದಲ್ಲಿ ಆಚಾರ್ಯರು ಅನುಗ್ರಹಿಸಿರುವ ರಾಜಕುಮಾರ ನ್ಯಾಯವೇ ಇದನ್ನೂ ಪರಿಹರಿಸುತ್ತದೆ. ರಾಜನ ಅಪ್ಪಣೆಯಂತೆಯಲ್ಲವೇ ಸೇವಕನು ಸೇವೆಯನ್ನು ಮಾಡಬೇಕು. ಸ್ವೇಚ್ಛೆಯಿಂದ ಮಾಡಿದರೆ ನಿಗ್ರಹಕ್ಕೆ ಪಾತ್ರನಾಗುವುದಿಲ್ಲವೇ? ಹೀಗೆಯೇ ಆಚಾರ್ಯ ಮೂಲಕವಾಗಿಯೇ ಗ್ರಹಿಸಬೇಕೆಂಬ ರಾಜಾಧಿರಾಜನ ಶಾಸನವಿದ್ದರೆ, ಈ ವಿಷಯದಲ್ಲಿ ನಮ್ಮ ಯುಕ್ತಿಯು ಅಪ್ರಯೋಜಕ, ಪ್ರತ್ಯುತ ಬಾಧಕವೂ ಸಹ ಆಗುತ್ತದೆ. "ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್" ಇತ್ಯಾದಿ ವಿಧಿವಾಕ್ಯವೂ—ಸ್ಪಷ್ಟವಾಗಿದೆ. ಶ್ರೀ ಕೃಷ್ಣನೂ ಸಹ ಸ್ವಾನುಷ್ಠಾನದಿಂದ ಇದನ್ನು ಪ್ರಕಾಶಪಡಿಸಿರುತ್ತಾನೆ. ಲೋಕದಲ್ಲೂ ಕೂಡ ಒಂದು ಸ್ವತ್ತನ್ನು ತೆಗೆದುಕೊಳ್ಳುವವನು ಸರ್ಕಾರದ ನಿಯಮದಂತೆಯೇ ಸ್ವಲ್ಪವೂ ವ್ಯತ್ಯಾಸವಿಲ್ಲದೆ ವ್ಯವಹಾರ ನಡೆಯಿಸುವುದಿಲ್ಲವೆ? ಈ ವಿಷಯದಲ್ಲೂ ಸಹ ಪತ್ರದ ಕಿಮ್ಮತ್ತನ್ನು ಬೇರೆ ವಿಧವಾಗಿ ಸರಕಾರಕ್ಕೆ ಪಾವತಿಮಾಡಿ, ಸಾದಾ ಕಾಗದದಲ್ಲೇ ವ್ಯವಹಾರವನ್ನು ಮಾಡಬಹುದಲ್ಲವೆ? ಎಂದರೆ ಯಾವ ಉತ್ತರ ಬರುತ್ತದೆ ಎಂದು ವಿಮರ್ಶಿಸಬೇಕು. ವೇದವು "ತತ್ತದಭಿಮಾನಾನುಗುಣಃ ಪುರುಷಾರ್ಥಃ" ಎಂದು ಶ್ರೀ ಭಾಷ್ಯಕಾರರು ಹೇಳಿರುವ ಪ್ರಕಾರ. ಈ ಶರೀರವಿರುವಾಗಲೇ ಪಶುಪುತ್ರಾದಿ ಫಲಗಳನ್ನು ಅಪೇಕ್ಷಿಸುವವರಿಗೂ, ನಂತರ ಸ್ವರ್ಗಸುಖವನ್ನು ಅಪೇಕ್ಷಿಸುವವರಿಗೂ ಸಹ ಸಾಧನ ಪ್ರಕಾರಗಳನ್ನು ಹೇಳಿರುತ್ತದೆ. ಇದನ್ನು ಸರಿಯಾಗಿ ನಡಯಿಸಿ ಐಹಿಕ ಫಲವನ್ನು ಹೊಂದಿರುವುದು ದೃಷ್ಟ ಇದು ಪರಮಪುರುಷನ ಪ್ರಸಾದದಿಂದಲೇ ಉಂಟಾಗಲಿಲ್ಲವೆ? ಹೀಗೆಯೇ ಪರಮ ಪುರುಷಾರ್ಥವನ್ನೂ ಕೂಡ ವೇದೋಕ್ತ ಮಾರ್ಗದಿಂದ ಹೊಂದಲು ಸಂಶಯವೇ ಇಲ್ಲ. "ಷಣುದಾನೇ" "ಪುರುಷನೋತೀತಿಪುರುಷಃ" ಎಂಬ ವ್ಯುತ್ಪತ್ತಿಯಿಂದ ಅಧಿಕವಾದ ಫಲವನ್ನು ಕೊಡುವವನೇ ಪರಮಪುರುಷ ಎಂಬ ಪ್ರಸಿದ್ಧಿ ಪರಮಾತ್ಮನಿಗೊಬ್ಬನಿಗೇನೆ ಅನ್ವರ್ಥವಾಗಿದೆ ಇದನ್ನು ಹೊಂದುವ ಜೀವನಿಗೂ "ಪುರತೀತಿ" ಎಂದರೆ ಅಗ್ರಗಾಮಿಯಾದ್ದರಿಂದ ಪುರುಷ ಎಂಬ ಪ್ರಸಿದ್ಧಿ ಬಂದಿದೆ. "ಪುರ ಅಗ್ರಗಮನೆ" ಎಂಬ ಧಾತುವಿನಿಂದ ಈ ಶಬ್ದ ಹುಟ್ಟಿದೆ. ಆದ್ದರಿಂದ ಉತ್ತರೋತ್ತರ ಉನ್ನತ ಪದವಿಯನ್ನು ಹೊಂದಲು ಪ್ರಯತ್ನಪಡುವವನೇ ಪುರುಷನು. ನಿರತಿಶಯ ಫಲವನ್ನು ದಾನ ಮಾಡುವವನೇ ಪರಮ ಪುರುಷನು. ಈ ಅಭಿಪ್ರಾಯದಿಂದಲೇ "ಉದಾರಾಃ ಸರ್ವ ಏವೈತೆ ಜ್ಞಾನೀತ್ವಾತ್ಮೈವ ಮೇ ಮತಂ" ಎಂದು ಶ್ರೀ ಕೃಷ್ಣನು ಅನುಗ್ರಹಿಸಿರುತ್ತಾನೆ.

ಪ್ರಕೃತ ಶ್ರೀ ಮದಾಚಾರ್ಯರ ಏಳನೆಯ ಶತಮಾನೋತ್ಸವ ಕಾಲದಲ್ಲಿ. ಆಚಾರ್ಯರಿಗೆ ಪ್ರೀತಿಜನಕವಾದ

ವ್ಯಾಪಾರ ಎಂದರೆ ಒಬ್ಬ ಜ್ಞಾನಿಯನ್ನು ತಯಾರುಮಾಡುವುದು ಕೋಟ್ಯಾಂತರ ವೆಚ್ಚಮಾಡಿ ದೇವಸ್ಥಾನ ಕಟ್ಟಿಸಿ, ವಿಗ್ರಹ ಪ್ರತಿಷ್ಠೆ ಮಾಡಿಸುವುದಕ್ಕಿಂತಲೂ, ಅತ್ಯುತ್ತಮವಾದದ್ದು ಎಂದು ನಿರ್ಣಯಿಸಬಹುದು ಆದ್ದರಿಂದ ಈಗಲಾದರೂ ಆಚಾರ್ಯರ ಸಂಪ್ರದಾಯ ಶುದ್ಧಿ ಎಂಬ ಗ್ರಂಥಭಾಗವನ್ನು ಅಧ್ಯಯನಮಾಡಿ, ಸಂಕೇತವೆಂಬ ಪಿಶಾಚವನ್ನು ದೂರೀಕರಿಸಿ. ಐಕಮತ್ಯದಿಂದ ಈಗಿನ ಕಾಲಕ್ಕನುಗುಣವಾಗಿ, ರಹಸ್ಯತ್ರಯಾರ್ಥರೂಪವಾದ ಉಪಯುಕ್ತಾಂಶದಲ್ಲಾದರೂ ವಿಶದವಾದ ಜ್ಞಾನವನ್ನು ಜನತೆಗೆ ಉಂಟುಮಾಡಲು ಪ್ರಯತ್ನಪಟ್ಟು ಶ್ರೀಮದಾಚಾರ್ಯರ ಕೃಪೆಗೆ ಪಾತ್ರರಾಗಬೇಕು.

**ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ ನಿಬೋಧತ**

---

(ಈ ಲೇಖನ ಶ್ರೀ ವೇಂಕಟೇಶಸಭೆಯವರ ಸೌಜನ್ಯ ಮೂಲಕ ಅವರ 'ದೇಶಿಕ ಸಂಭಾವನಾಗ್ರಂಥ'ದಿಂದ ಸ್ವೀಕರಿಸಲ್ಪಟ್ಟಿತು. ರೂ. 20/– ಬೆಲೆಯುಳ್ಳ ಈ ಉತ್ತಮಗ್ರಂಥ ಬೇಕಾದವರು ಶ್ರೀ ವೇಂಕಟೇಶಸಭೆ, 561, ರಾಮಚಂದ್ರ ಅಗ್ರಹಾರ, ಮೈಸೂರು – 4 ಎಂಬ ವಿಳಾಸದಿಂದ ಪಡೆಯಬಹುದು. ಸಂ॥)



# ಚಂದಾದಾರರಿಗೆ ವಿಜ್ಞಪ್ತಿ

ಸಪ್ತಗಿರಿ ಮಾಸಪತ್ರಿಕೆಯ ಚಂದಾದಾರರುಗಳಲ್ಲಿ ಕೆಳಕಂಡವರ ಚಂದಾಗಳು 31—8—75 ತಾರೀಖಿಗೆ ಮುಗಿಯಲಿವೆ. ಚಂದಾದಾರರು ಸಹಾನುಭೂತಿಯಿಂದ ಹಣವನ್ನು ಮನಿಯಾರ್ಡರುಮೂಲಕ ಕಳುಹಿಸಿ ಕೊಡಬೇಕೆಂದು ಕೋರುತ್ತೇವೆ. ಚಂದಾದಾರರು ದಯವಿಟ್ಟು ಮನಿಯಾರ್ಡರು ಕೂಪನಿನಲ್ಲಿ ತಮ್ಮ ಚಂದಾ ಸಂಖ್ಯೆಯನ್ನು ನಮೂದಿಸಬೇಕು.

| | | | | | | | | | | |
|---|---|---|---|---|---|---|---|---|---|---|
| 3, | 137, | 157, | 174, | 176. | 177, | 250, | 252, | 253, | 258, | ರೂ. **6-00** |
| 260, | 265, | 266, | 267. | 268, | 269, | 271, | 303. | 304, | 305, | |
| 306, | 307, | 308, | 310, | 311, | 314, | 315, | 317, | 318, | 319, | |

ಚಂದಾವನ್ನು M.O. ಮೂಲಕ ಸಂಪಾದಕರು, 'ಸಪ್ತಗಿರಿ' ಮಾಸಪತ್ರಿಕೆ, ತಿರುಮಲ – ತಿರುಪತಿ ದೇವಸ್ಥಾನ, ತಿರುಪತಿ, ಆಂಧ್ರಪ್ರದೇಶ್ ಎಂಬ ವಿಳಾಸಕ್ಕೇ ಕಳುಹಿಸಬೇಕು. ಚೆಕ್ಕುಗಳನ್ನು ಕಳುಹಿಸಿದ್ದಲ್ಲಿ, ಅಥವಾ ವಿಳಾಸ ತಪ್ಪಿದ್ದಲ್ಲಿ, ಆಗುವ ಆಲಸ್ಯಕ್ಕೆ ಯಾವ ವಿಧದಲ್ಲೂ ಈ ಕಾರ್ಯಾಲಯ ಬಾಧ್ಯತೆ ವಹಿಸಲಾಗದು. ಚಂದಾದಾರರೆಲ್ಲರೂ ಸಹೃದಯತೆಯಿಂದ ಚಂದಾ ಕಳುಹಿಸ ಬೇಕೆಂದು ಪ್ರಾರ್ಥನೆ.

EDITED AND PUBLISHED ON BEHALF OF THE T. T. DEVASTHANAMS BY K. SUBBA RAO, M.A. AND PRINTED AT T. T. D. Press, By M. Vijayakumar Reddy Manager, T. T. D. Press, Tirupati.

# ಸಪ್ತಗಿರಿ

## ತಿರುಮಲ ತಿರುಪತಿ ದೇವಸ್ಥಾನಗಳ ಮಾಸಪತ್ರಿಕೆ

ತಿರುಮಲ ತಿರುಪತಿ ದೇವಸ್ಥಾನ ತನ್ನ ಸಪ್ತಗಿರಿ ಪತ್ರಿಕೆಯನ್ನು ಹಿಂದಿನಂತೆಯಲ್ಲದೆ, ಕನ್ನಡಭಾಷೆಯಲ್ಲಿ ಪ್ರತ್ಯೇಕವಾಗಿ ಬಿಡುಗಡೆ ಮಾಡುತ್ತಿದೆ, ಧಾರ್ಮಿಕ, ಮತ ಮತ್ತು ಸಾಂಸ್ಕೃತಿಕ ಲೇಖನಗಳನ್ನು. ದೇವಾಲಯಗಳ ಚರಿತ್ರೆಗಳು, ಫೋಟೋಗಳು, ಬಣ್ಣ ಚಿತ್ರಗಳನ್ನು ಕಳುಹಿಸಲು ಕೋರುತ್ತೇವೆ.

ಪತ್ರಿಕೆಯಲ್ಲಿ ಪ್ರಚುರಿಸಲು ವ್ಯಾಪಾರ ಪ್ರಕಟಣೆಗಳು ಕೆಳಗಿರುವ ಬೆಲೆಗಳ ಪ್ರಕಾರ ಸ್ವೀಕರಿಸಲ್ಪಡುತ್ತವೆ.

| | | |
|---|---|---|
| ಒಳಗಡೆ ಪುಟಗಳಲ್ಲಿ : | ಪೂರ್ತಿಪುಟ | ರೂ 80 |
| | ಅರ್ಧಪುಟ | ,, 50 |
| | ಕಾಲುಪುಟ | ,, 30 |
| ರಕ್ಷಾಪುಟ : 4 ನೆಯ ಪುಟ | 1 ಬಣ್ಣದ್ದು | ರೂ 200 |
| | 2 ,, | ,, 250 |
| | 3 ,, | ,, 300 |
| ಕವರಿನೊಳಗೆ 2 ನೆಯ ಪುಟ, 3 ನೆಯ ಪುಟ | 1 ಬಣ್ಣದ್ದು | ರೂ 150 |
| | 2 ,, | ,, 200 |
| | 3 ,, | ,, 250 |
| ಪ್ರತ್ಯೇಕ ಜಾಗದಲ್ಲಿ ; | 1 ಮೊಟ್ಟ ಮೊದಲನೆಯ ಪುಟ | ರೂ 150 |
| | 2 ಕೊನೆಯ ಪುಟ | ,, 110 |
| | 3 ವಾರ್ತೆಯ ಪುಟಕ್ಕೆ ಎದುರು ಪುಟ : | |
| | 1 ಪುಟ | ರೂ. 100 |
| | ½ ಪುಟ | ,, 60 |

ಸೂಚನೆ:_ 4 ನೆಯ ರಕ್ಷಾಪುಟ ಬಿಟ್ಟು, ಮಿಕ್ಕ ಪುಟಗಳಗಲ್ಲಿ 6 ಮಾಸಿಕ ಸಂಚಿಕೆಗಳಿಗೆ ಮುಂಗಡ ಹಣ ಪಾವತಿಮಾಡಿ ಸ್ಥಳ ಕಾದಿರಿಸಿಕೊಳ್ಳುವ ಪ್ರಕಟಣಾದರಗಳ ಮೇಲೆ 10%, 12 ಸಂಚಿಕೆಗಳಿಗೆ ಸ್ಥಳ ಕಾದಿರಿಸಿ ಮಾಡಿಕೊಳ್ಳುವವರಿಗೆ ಶೆಕಡ 15% ರಿಯಾಯಿತಿ ಕೊಡಲಾಗುವುದು, ಈ ವ್ಯಾಪಾರ ಪ್ರಕಟಣೆಗಳ ವಿಷಯದಲ್ಲಿ ಮುನ್ಸೂಚನೆ ಕೊಡದೆಯೋ ಮತ್ತು ಕಾರಣಗಳನ್ನು ತಿಳಿಸದಯೋ ಯಾವ ಪ್ರಕಟಣೆಯನ್ನಾದರೂ ನಿರಾಕರಿಸುವ ಹಕ್ಕು ಸಂಪಾದಕರಿಗೆ ಸೇರಿದೆ.

ಏಜಂಟುಗಳಿಲ್ಲದ ಸ್ಥಳಗಲ್ಲಿ 20% ಕಮೀಷನು ಮೇಲೆ, ಪತ್ರಿಕೆಯನ್ನು ಮಾರಾಟಮಾಡಲು ಏಜಂಟುಗಳು ಬೇಕು. 25 ಹೆಚ್ಚಿನ ಪ್ರತಿಗಳನ್ನು ಕೋರುವವರಿಗೆ ಕೂಡ ಹೇಳಿದ ಕಮಿಷನ್ ಕೊಡಲಾಗುದು.

ಬಿಡಿ ಪತ್ರಿ ಬೆಲೆ: **50** ಪೈ. ವಾರ್ಷಿಕ ಚಂದಾ: ರೂ, **6/–** ಇತರ ದೇಶಗಳಲ್ಲಿ: ರೂ. **20/–**

ಇದಕ್ಕೂ. ಮತ್ತಿತರ ಪ್ರಚುರಣೆಗಳಿಗೂ ಸಂಬಂಧಿಸಿದ ವಿವರಗಳಿಗಾಗೆ ಕೆಳಗಿನ ವಿಳಾಸಕ್ಕೆ ಬರೆಯಿರಿ,

ಸಂಪಾದಕರು,

ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ, ಆಂಧ್ರಪ್ರದೇಶ್.

ಸಂಚಿಕೆ ೬ ಸಂಪುಟ ೨

**ಬಿಡಿ ಪತ್ರಿಕೆ ಬೆಲೆ:** ೫೦ ಪೈಸೆಗಳು.

ಸಂವತ್ಸರ ಚಂದಾ : ರು ೬

★

ಸಪ್ತಗಿರಿ ಪತ್ರಿಕೆಯನ್ನು ಕೆಳಗಿನ ವಿಶೇಷ ಸಂದರ್ಭಗಳನ್ನು ಪುರಸ್ಕರಿಸಿಕೊಂಡು ಪ್ರತ್ಯೇಕ ಲೇಖನಗಳೊಂದಿಗೆ ಬಿಡುಗಡೆ ಮಾಡವ ಸಂಕಲ್ಪ ವಿದೆ.

| | | |
|---|---|---|
| ಆಗಸ್ಟ್ | ... | ಶ್ರೀಕೃಷ್ಣ ಜನನಂ |
| ಸೆಪ್ಟೆಂಬರ್ | ... | ವಿನಾಯಕ ಚತುರ್ಥಿ |
| ಅಕ್ಟೋಬರ್ | ... | ಶ್ರೀಯುವರ ಬ್ರಹ್ಮೋತ್ಸವ, ದಸರಾ |
| ನವಂಬರ್ | ... | ದೀಪಾವಳಿ |
| ಡಿಶೆಂಬರ್ | ... | ಮಾರ್ಗಶಿರ ಪ್ರಾಧಾನ್ಯತೆ |

ಲೇಖಕರು, ಚಿತ್ರಕಾರರು ಮೇಲೆ ಹೇಳಿದ ವಿಶೇಷ ದಿನಗಳಿಗೆ ಸಂಬಂಧಿಸಿದ ಲೆಖನ ಮತ್ತು ಚಿತ್ರಗಳನ್ನು, ಆಥಮಪಕ್ಷ ಎರಡು ತಿಂಗಳಿಗಳಿಗೆ ಮುಂಚೆಯೇ ಕಳುಹಿಸ ಬೇಕೆಂದು ಕೋರುತ್ತವೆ.

★




ದೇವಸ್ಥಾನದ ಪ್ರಚುರಣಗಳಿಗೆ,
ಮತ್ತು ಮಿಕ್ಕ ವಿವರಗಳಿಗೆ :

ಸಂಪಾದಕರು,

ತಿರುಮಲ ತಿರುಪತಿ ದೇವಸ್ಥಾನ

ತಿರುಪತಿ. 517501

